# ನಮ್ಮಲ್ಲಿ

## - ಕನ್ನಡ ಪುಸ್ತಕಗಳು -

| | | | | |
|---|---|---|---|---|
| ಶಾಂತಿ ಪುರಾಣ . . | | 3 | 0 | 0 |
| ಚಂದ್ರಗುಪ್ತ ಚಕ್ರವರ್ತಿ . | | 1 | 0 | 0 |
| ಸರಸ್ವತೀ . . . (ಸಾಮಾಜಿಕ ನಾಟಕ) | | 0 | 8 | 0 |
| ಒಂದೇ ತಿಂಗಳಲ್ಲಿ ಇಂಗ್ಲಿಷ್ . (ಇಂಗ್ಲಿಷ್ ಸ್ವಯಂಬೋಧಿನಿ) | | 0 | 8 | 0 |
| ಸಾಮುದ್ರಿಕ ಶಾಸ್ತ್ರ . . | | 0 | 8 | 0 |
| ಹೊಂದೊವಲ ಹಂಬಲು. . | | 0 | 6 | 0 |
| ವೀರಭೂಮಿ (ಕತೆ) . . | | 0 | 1 | 6 |
| ಗೀತೆಯ ಕೈಗನ್ನಡಿ . . | | 0 | 4 | 0 |
| ಗೀತೆಯ ಮೂಲ . . (ಈಶಾವಾಸ್ಯೋಪನಿಷತ್ತಿನ ಭಾಷಾಂತರ) | | 0 | 1 | 0 |
| ಸ್ತ್ರೀಪದ್ಯರತ್ನಾಕರ ಭಾಗ | I | 0 | 1 | 0 |
| ಡಿ | II | 0 | 1 | 0 |
| ಡಿ | III | 0 | 1 | 0 |
| ಡಿ | IV | 0 | 1 | 0 |
| ಪುರಂದರ ದಾಸರ ಪದ ಭಾಗ | I | 0 | 4 | 0 |
| ಡಿ | II | 0 | 4 | 0 |
| ಡಿ | III | 0 | 4 | 0 |
| ಮಧುವನ . . . | | 1 | 8 | 0 |
| ಧರ್ಮಸಂಕಟ (ಸಾಮಾಜಿಕ ನಾಟಕ) | | 0 | 4 | 0 |
| (Gouthama the Buddha) | | 0 | 8 | 0 |
| ಭಗವದ್ಗೀತೆ . . . | | 0 | 2 | 0 |
| ಕುಕ್ಕುಟ ಪಂಚಾಂಗ . . | | 0 | 1 | 0 |
| ಮಗ್ಗಿ . . . . | | 0 | 1 | 6 |
| ತುಳುನಾಡ್ ತಿಲಕ ಪಂಚಾಂಗ . | | 0 | 1 | 0 |
| ವೈಜಯಂತೀ ಪಂಚಾಂಗ . | | 0 | 2 | 6 |
| ಜಯಪಾಂಡ್ಯ ವಿಜಯ . . | | 0 | 2 | 0 |

## - ತುಳು ಪುಸ್ತಕಲು -

| | | | |
|---|---|---|---|
| ಕೃಷ್ಣಸಂಧಾನ (ಪ್ರಸಂಗ) . (ಕನ್ನಡ ಕೃಷ್ಣಸಂಧಾನವನ್ನೊಳಗೊಂಡಿದೆ.) | 0 | 8 | 0 |
| ಬಲೀಂದ್ರ (ಕತೆ) . . (ವಿಮರ್ಶಾತ್ಮಕ ಲೇಖನ) | 0 | 2 | 0 |
| ಅಳಿಯ ಸಂತಾನ ಕಟ್ಟದ ಗುಟ್ಟು | 0 | 4 | 0 |
| ಕಾನಿಗೆ (ಪದ್ಯ) . . | 0 | 4 | 0 |
| ತುಳುವ್ಯಾಕರಣ . . | 0 | 8 | 0 |
| ಜನಮರ್ಲ್ (ನಾಟಕ) . . | 0 | 6 | 0 |
| ಮದ್‌ಮಾಳತ್ತ್ ಮದ್‌ಮಾಯೆ. (ಕತೆ) | 0 | 2 | 0 |
| ಬಂಗಾರ್‌ದಂಗಿದ ಕತೆ . . | 0 | 1 | 0 |
| ಪದ್ಯಮಾಲಿಕೆ . . | 0 | 1 | 0 |
| ಮಿತ್ಯನಾರಾಯಣ ಕತೆ. . | 0 | 8 | 0 |
| ಸತೀ ಕಮಲೆ (ನಾವೆಲ್) . . | 0 | 6 | 0 |
| ಕನ್ಯೋಪದೇಶ . . . | 0 | 2 | 0 |
| ಕನ್ನಡಕೊ . . . | 0 | 0 | 6 |
| ವಾಲಿಸುಗ್ರೀವರ ಕಾಳಗ. . | 0 | 3 | 0 |
| ಬೊಬ್ಬರ್ಯ (ಪಾಡ್ದನ) . . | 0 | 2 | 0 |
| ತೊಡಕಿನಾರ್ ,, . . | 0 | 2 | 0 |
| ಮುಂಡತ್ತಾಯ ,, . . | 0 | 2 | 0 |
| ವಿಶ್ವರೂಪ ದರ್ಶನ . . (ಗೀತೆಯ II ನೇ ಅಧ್ಯಾಯದ ಪದ್ಯಾತ್ಮಕ ಭಾಷಾಂತರ) | 0 | 1 | 0 |
| ಭಗವದ್ಗೀತೆ . . | 0 | 5 | 6 |

**ತುಳುನಾಡ್ ಪ್ರೆಸ್,**

**ಉಡುಪಿ, ದ. ಕ.**

# ಅಂತರಂಗ

ಸಂಪುಟ ೧.

೧೧ ಸಪ್ಟಂಬರ್ '೩೮
ಆದಿತ್ಯವಾರ.

ಸಂಚಿಕೆ ೬.

## ಅಂತರಂಗ

ವಿಶೇಷ ತರದ ಕನ್ನಡ ವಾರಪತ್ರಿಕೆ.

**ಮಣಿಪಳ, ಉಡುಪಿ.**

**ಎಸ್. ಯು. ಪಣಿಯಾಡಿ.**
(*Editor in-chief*)

**ಕೆ. ಹೈದರ್.**
(*Managing Editor*)

●

Associate Editors

ಎಸ್. ಎಸ್. ಕಾರಂತ.
ಪಿ. ವಿ. ಆಚಾರ್ಯ.
ಪಿ. ಎಲ್. ಅಡಿಗ.
ಎಂ. ವಿ. ಹೆಗ್ಡೆ.

Members of the Advisory Board

ಶ್ರೀ. ಬಿ. ವಾಸುದೇವರಾವ್, ಬಿ. ಎ., ಬಿ. ಎಲ್.
,, ಕೊರಡ್ಕಲ್ ಶ್ರೀನಿವಾಸರಾವ್, ಗ್ರಂಥಕರ್ತ.
,, ಆರ್. ಆರ್. ಕುಂಜೂರು.
,, ಪಿ. ವಿ. ಉಪಾಧ್ಯಾಯ, ಬಿ. ಎ., ಎಲ್ಎಲ್. ಬಿ.
,, ಆರ್. ಎಸ್. ಶೆಣೈ, ಸಂಪಾದಕ, ವರ್ತಕಧುರೀಣ
,, ಕೆ. ಎಚ್. ಶೆಟ್ಟಿ, ಮೆನೇಜರ್, ನವಯುಗ.
ಶ್ರೀಮತಿ. ಪಿ. ಭಾರತೀ ಬಾಯಿ.
ಶ್ರೀ. ಪಿ. ಎನ್. ಬಿ. ರಾಮಾಚಾರ್ಯ, ಸಂಪಾದಕ, ನವಶಕ್ತಿ.
,, ಯು. ವೆಂಕಟರಮಣಾಚಾರ್ಯ, ಮೆನೇಜರ್ ಶ್ರೀಕೃಷ್ಣಸಂದೇಶ
,, ಉಪೇಂದ್ರ ಅನಂತ ಪೈ, ಮಾಲಕ, ಚಿತ್ರಕಲಾ.

●

## ಚಂದಾ ವಿವರ:

**ವಾರ್ಷಿಕ ಚಂದಾ ಮೂರು ರೂಪಾಯಿ.**

ವಿ. ಪಿ. ಕ್ರಮವಿಲ್ಲ. ಹಣವನ್ನು ಮುಂಗಡವಾಗಿ ಕಳುಹಬೇಕು.

. . . . .

**ಬಿಡಿ ಸಂಚಿಕೆ ಒಂದಾಣೆ.**

ನಿಮ್ಮ ಊರಿನ ಏಜಂಟರಿಂದ ಪಡಕೊಳ್ಳಿರಿ.

. . . . .

## ಜಾಹಿರಾತಿನ ದರ:

| | | | | |
|---|---|---|---|---|
| ಇಡೀ | ಪುಟ | ರೂಪಾಯಿ | ೧೦—೦—೦ | ಒಂದು ಸರ್ತಿಗೆ |
| ಅರ್ಧ | ,, | ,, | ೫—೦—೦ | ,, |
| ಕಾಲು | ,, | ,, | ೩—೦—೦ | ,, |
| ಅರೆಕಾಲು | ,, | ,, | ೨—೦—೦ | ,, |
| ಕೆಲವು ಇಂಚಿಗೆ | | ,, | ೧—೦—೦ | ,, |

## ಜಾಹಿರಾತು ಕೊಡುವವರಿಗೆ ಸಲಹೆ:

೧. ಜಾಹಿರಾತಿನ ವಿಷಯಗಳು ಅಯೋಗ್ಯವಾಗಿ ಕಂಡುಬಂದಲ್ಲಿ ಮುದ್ರಿಸಲಾಗುವುದಿಲ್ಲ.

೨. ಒಂದೇ ಬದಿಯಲ್ಲಿ ವಿವರವಾಗಿ ಬರೆಯಬೇಕು.

೩. ಬದಲಾವಣೆಯಲ್ಲಿ ಒಂದುವಾರ ಮುಂಚಿತವಾಗಿ ತಿಳಿಸಬೇಕು

೪. ಬ್ಲೋಕುಗಳು ವಾಪಾಸು ಬೇಕಾದಲ್ಲಿ ಅವರವರ ಖರ್ಚಿನಿಂದಲೇ ವಾಪಾಸು ಪಡೆಯಬೇಕು.

೫. ಜಾಹಿರಾತಿನ ಬಾಬ್ತು ಹಣವನ್ನು ಮುಂಗಡವಾಗಿಯೇ ಕೊಡಬೇಕು.

**ಮಾಲಕರು ಮುದ್ರಕರು ವ ಪ್ರಕಾಶಕರು:**

**ಸಪ್ಲೈ ಏಜೆನ್ಸಿ ಲಿಮಿಟೆಡ್ ಉಡುಪಿ.**

**ಮುದ್ರಣ ವ ಪ್ರಕಟನಾ ಸ್ಥಳ: ಮನಿಪಳ ಪವರ್ ಪ್ರೆಸ್, ಮನಿಪಳ, ಉಡುಪಿ.**

# ಅಂತರಂಗ

## ಅರಸಿ ● ● ● ● ● ● ಅರಿಸಿದ್ದು

**ಮುಸ್ಲಿಮ್ ಲೀಗಿನ ಶಿಸ್ತು:**

ಕೇಂದ್ರ ವಿಧಾಯಕ ಸಭೆಯಲ್ಲಿ ಮುಸ್ಲಿಮ್ ಲೀಗಿನವರು ಸೈನ್ಯ ಮಸೂದೆಗೆ ಬೆಂಬಲವಿತ್ತುದಕ್ಕಾಗಿ ಕಾನ್ಪುರ ಮುಸ್ಲಿಮ್ ಲೀಗಿನವರು ತಮ್ಮ ನಿಷೇಧವನ್ನು ವ್ಯಕ್ತಪಡಿಸಿದ್ದಾರೆ. ಇಷ್ಟು ಮಾತ್ರವಲ್ಲದೆ ಬ್ರಿಟಿಷ್ ಸಾಧನಗಳನ್ನು ಬಹಿಷ್ಕರಿಸಬೇಕೆಂದೂ, ಸಾಮ್ರಾಜ್ಯ ಶಾಹೀ ಯುದ್ಧದಲ್ಲಿ ಭಾರತದ ಮುಸ್ಲಿಮರು ಭಾಗವಹಿಸಬಾರದೆಂದೂ ಎರಡು ಠರಾವುಗಳು ಮಂಜೂರು ಮಾಡಲ್ಪಟ್ಟವು.

ಮುಸ್ಲಿಮ್ ಲೀಗಿನ ಶಿಸ್ತನ್ನು ಮುರಿದುದಕ್ಕಾಗಿ ಮಿ| ಜಿನ್ನರು ಕಾನ್ಪುರ ಲೀಗಿನವರ ಮೇಲೆ ಶಿಸ್ತು ಜಾರಿ ಮಾಡಿಬಿಡಬಹುದೆ? ಕಾನ್ಪುರದಲ್ಲಿ ಸ್ಪಷ್ಟಗೊಳಿಸಲ್ಪಟ್ಟ ಖಂಡನೆಯ ಧ್ವನಿಯು ಭಾರತದ ಎಲ್ಲೆಡೆಗಳಲ್ಲಿಯೂ ಪ್ರತಿ ಧ್ವನಿಸಬಹುದು!

o o o

**ಅಧ್ಯಕ್ಷರ ಅಧಿಕಾರ**

ಕಾಂಗ್ರೆಸ್ ಅಧ್ಯಕ್ಷರ ಅನುಮತಿಯಿಲ್ಲದೆ ಪಾರ್ಲಿಮೆಂಟರಿ ಸಬ್ ಕಮಿಟಿಯು ಇಚ್ಛೆಬಂದಂತೆ ವರ್ತಿಸುತ್ತಿದೆಯೆಂದು ಶ್ರೀ. ನರಿಮನರ ದೂರು!

ಅಧ್ಯಕ್ಷರೆಂದರೆ ಕಾಂಗ್ರೆಸಿನ ನಾಮ ಮಾತ್ರ ಅಧಿದೇವತೆಯೆಂದು ಸರ್ದಾರ್ ಪಟೇಲರು ಮೊದಲೊಮ್ಮೆ ಹೇಳಿರುವುದು ಮರೆತು ಹೋಗಿದೆಯೆ?

o o o

**ಭಾರತೀಯ ವಿಲ್ಲಿಂಗ್ಡನ್!**

ಸರ್. ಸಿ. ಪಿ. ರಾಮಸ್ವಾಮಿ ಐಯ್ಯರ್‌ರವರು ಲಾರ್ಡ್ ವಿಲ್ಲಿಂಗ್ಡನರಿಗಿಂತಲೂ ಒಂದು ಹೆಜ್ಜೆ ಮುನ್ನಡೆದು ಭಾರತೀಯರಲ್ಲಿಯೂ ವಿಲ್ಲಿಂಗ್ಡನರಿದ್ದಾರೆಂಬುದನ್ನು ವ್ಯಕ್ತಪಡಿಸಿದರು!

ಹೀಗಾದರೂ ಭಾರತದ ಗತ ಕೀರ್ತಿಯನ್ನು ಸಂಪಾದಿಸುತ್ತಿರುವುದಕ್ಕಾಗಿ ಅವರನ್ನು ಅಭಿವಂದಿಸಬೇಡವೆ?

o o o

**ದೊಡ್ಡಣ್ಣನ ಕನಸು!**

ಮುಸ್ಲಿಮ್‌ಲೀಗ್– ಕಾಂಗ್ರೆಸ್ ಐಕ್ಯ ಯತ್ನಗಳು ನಿಷ್ಫಲವಾದುದರಿಂದ ಮಿ| ಜಿನ್ನರವರ ಬಲಗೈಯೆಂತಿರುವ ಮೌಲಾನಾ ಶೌಕತಾಲಿಯವರಿಗೂ ಬೇಸರವಾಗಿದೆ. ಮೊನ್ನೆ ಸಿಮ್ಲಾದಲ್ಲಿ ಹೇಳಿದರವರು: "ಮಿ| ಜಿನ್ನರು ಐಕ್ಯ ಸಂಭಾಷಣೆಯ ಅಪಜಯದಿಂದಾಗಿ ನಿರಾಶರಾಗಿದ್ದಾರೆ. ಯುದ್ಧವನ್ನು ಇನ್ನೂ ನಡೆಸಿಕೊಂಡು ಬರುವುದಕ್ಕಿಂತ ಅದನ್ನು ಕೊನೆಗೊಳಿಸಿದರೇನು? ನನ್ನ ಮೊದಲಿನ ಸಹೋದ್ಯೋಗಿಗಳೊಡನೆ ಹೋರಾಡಲು ನನಗಿಚ್ಛೆಯಿಲ್ಲ. ಅದು ಹೇಗೂ ಇರಲಿ. ಭಾರತವು ಸ್ವತಂತ್ರವಾಗುವ ಕನಸು ನನಸಾಗಿಯೇ ನಾನು ಸಾಯುವೆನು!"

ಮುಸ್ಲಿಮ್ ಲೀಗಿನ ಅರಮನೆಯ ನಾರಳಿನಡಿಗಟ್ಟು ತತ್ತರಿಸಲಾರಂಭಿಸಿದೆ.

**ಪಂಜಾಬ್ ಕಾಂಗ್ರೆಸ್.**

ಸರ್ ಸಿಕಂದರ್ ಹಯಾತ್ ಖಾನರ ಯೂನಿಯನಿಸ್ಟ್ ಪಕ್ಷವು ಪಂಜಾಬಿನಲ್ಲಿ ಅಧಿಕಾರವನ್ನು ನಡೆಸುತ್ತಿರುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಅಲ್ಲಿಯ ಕಾಂಗ್ರೆಸ್ ಧುರೀಣರು ಪರಸ್ಪರ ಜಗಳ ಮಾಡಿಕೊಳ್ಳುವುದರಲ್ಲಿಯೇ ನಿರತರಾಗಿದ್ದಾರೆ. ಅವರೊಳಗಿನ ಅಂತಃ ಕಲಹದ ತೀರ್ಮಾನಕ್ಕಾಗಿ ಕಾಂಗ್ರೆಸ್ ಅಧ್ಯಕ್ಷರು ಹೋಗಬೇಕಾಯಿತು. "ಸರ್ವಂ ಸ್ವಾರ್ಥಮಯಂ ಜಗತ್!"

o o o

**ಕಾಶ್ಮೀರ ಸತ್ಯಾಗ್ರಹ.**

ತಿರುವಾಂಕೂರಿನ ಸತ್ಯಾಗ್ರಹವು ಸರ್. ಸಿ. ಪಿ. ರಾಮಸ್ವಾಮಿ ಐಯ್ಯರರ ಪಾಲಿಗೆ ದುರಾಗ್ರಹವಾಯಿತು. ಇದೇ ಪರಿಸ್ಥಿಯು ಕಾಶ್ಮೀರ ಸಂಸ್ಥಾನದಲ್ಲಿಯೂ ತಲೆದೋರಿದೆ.

ಭಾರತದ ಎಲ್ಲಾ ಸಂಸ್ಥಾನಗಳು ಐಕಮತ್ಯದಿಂದ ವರ್ತಿಸುತ್ತಿಯೆಂಬುದು ಸ್ಪಷ್ಟವಾದಂತಾಯಿತು!

o o o

**೪೬ಕ್ಕೆ ೫೨!**

ಡಾ| ಯನ್. ಬಿ. ಖರೆಯವರ ಮೇಲೆ ೪೬ ಆರೋಪಗಳನ್ನು ನಾಗಪುರ ಕಾಂಗ್ರೆಸ್ ಕಮಿಟಿಯವರು ಹೊರಿಸಿರುವರಂತೆ. ಇದಕ್ಕೆ ಉತ್ತರವಾಗಿ ಡಾ| ಖರೆಯವರು ೫೨ ಪುಟಗಳ ಪ್ರತ್ಯಾರೋಪವನ್ನು ಪ್ರಕಟಿಸಲಿರುವರಂತೆ.

ಈಗಾಗಲೇ "ನರಿಮಾನಿತ"ರಾದ ಡಾ| ಖರೆಯವರೂ ಇದರ ಪರಿಣಾಮವಾಗಿ ಕಾಂಗ್ರೆಸಿನಿಂದ "ನಿರ್ವಾಸಿತ"ರಾಗುವುದು ಖಂಡಿತವೆಂದು ಶ್ರೀ. ಶುಕ್ಲರ ಖಂಡನಾ ಭಾಷಣಗಳಿಂದ ವ್ಯಕ್ತವಾಗುತ್ತದೆ.

——

# ಜಗತ್ತು ೧೯೩೯ರಲ್ಲಿ ನಾಶವಾಗುವುದಿಲ್ಲ.

## ''ಅಂತರಂಗ''ದ ಸಲಹೆಗಾರರಿಗೆ ಜರ್ಮನಿಯ ಡಾ. ವಿಲ್‌ಹೆಲ್ಮರ ಪತ್ರ.

### ಧೂಮಕೇತುವಿನ ಗತಿಯನ್ನು ಗಣಿಸಲೇ ಇಲ್ಲವೆನ್ನುತ್ತಾರೆ ಡಾ. ವಿಲ್‌ಹೆಲ್ಮರು.



ಮದ್ರಾಸಿನ ''ಸಂಡೇಟೈಮ್ಸ್'' ಎಂಬ ವಾರ ಪತ್ರಿಕೆಯ ಜುಲೈ ೧೭, ೧೯೩೮ರ ಸಂಚಿಕೆಯಲ್ಲಿ— ಜರ್ಮನಿಯ ಫ್ರಾಂಕ್‌ಫರ್ಟ್ ವಿಶ್ವ ವಿದ್ಯಾಲಯದ ಜ್ಯೋತಿಷ್ಕ ವೇಧ ಶಾಲೆಯ ಡೈರೆಕ್ಟರರಾದ ಡಾ| ಕರ್ಟ್ ವಿಲ್‌ಹೆಲ್ಮ್ ಮೀಸ್ನರರು ಭೂಕಂಪಗಳು ಆಗಾಗ ಆಗುತ್ತಿರುವುದರಿಂದ, ಶಾಂತ ಸಾಗರದ ಸಾಗರ ಧಾರೆಗಳು ನಿಂತಿರುವುದರಿಂದ ಮತ್ತು ಜಗತ್ತಿನ ಹವಾಮಾನವು ಬದಲಾಗಿರುವುದೇ ಮೊದಲಾದ ಆಧಾರಗಳಿಂದ ಜಗತ್ತು ಒಂದು ವರುಷದೊಳಗೆ ನಾಶವಾಗುವುದೆಂಬ ಭವಿಷ್ಯವನ್ನು ಹೇಳಿದ್ದಾರೆಂದು ಪ್ರಕಟವಾಗಿತ್ತು.

ಈ ಮಹತ್ವದ ಬದಲಾವಣೆಯ ಕಾರಣಗಳನ್ನು ವಿವರಿಸುತ್ತಾ—ಅತಿ ದೊಡ್ಡದಾದೊಂದು ಧೂಮಕೇತುವಿನಿಂದಾಗಿ ಸೂರ್ಯನ ಗತಿಯಲ್ಲಿ ಬದಲಾವಣೆಗಳಾಗುವುವಲ್ಲದೆ ಆ ಗ್ರಹವು ಮುಂದಿನ ವರುಷದ ಆದಿಯ ತನಕ ಕಾಣಿಸಲಾರದೆಂದು ಹೇಳಿರುವರೆಂದೂ, ಧೂಮಕೇತುವು ಆಕಾಶದಿಂದ ಪ್ರಚಂಡ ವೇಗವಾಗಿ ಹಾರಿದಾಗ ಜಗತ್ತಿನಲ್ಲಿ ಭೂಕಂಪಗಳೂ ನೆರೆಗಳೂ ತಲೆದೋರಿ ಒಂದೇ ವಾರದಲ್ಲಿ ಭೂಲೋಕವು ಸುಟ್ಟು ನುಚ್ಚುನೂರಾಗುವುದೆಂದೂ ತಿಳಿಸಲಾಗಿತ್ತು.

ಈ ವಾರ್ತೆಯು ಸತ್ಯವಾದುದೋ ಎಂಬುದನ್ನು ತಿಳಿಸಬೇಕೆಂದು ಅಂತರಂಗದ ಸಲಹೆಗಾರರಾದ ಶ್ರೀ. ಬೈಲೂರು ವಾಸುದೇವ ರಾವ್, ಬಿ. ಎ., ಬಿ. ಎಲ್., ಎಡ್ವೋಕೇಟರವರು ಡಾ| ಕರ್ಟ್ ವಿಲ್‌ಹೆಲ್ಮ್ ಮೀಸ್ನರ್‌ರವರಿಗೆ ಪತ್ರ ಬರೆದಾಗ ಅವರು ಕೆಳಗಿನಂತೆ ಉತ್ತರ ಬರೆದರು:

Dr. Karl Wilhelm Meissner
Universitäts Professor A. D.

Frankfurt/M.
Marbachweg. 318.

August 17, 1938

B. V. Rao, Advocate,
Udipi
South India
Asia

Dear Sir,

Your kind registered letter of July 21, 1938 yesterday duly arrived. It was very interesting for me, to be informed by you about the rather funny story in "The Sunday Times", Madras.

First of all I have to say that I think the whole affaire to be a mystification. Of course,

I am very much astonished that my good scientific name has been abused for publishing that nonsense.

Although my correct christian name is ''Karl Wilhelm'', there is no doubt that the predictions are published by an unknown being on account of my person. Without regard to changing ''Karl'' into ''Kurt'', the other statements concerning my person, are right in a certain degree. I was, indeed, ten year ago, Director of the Frankfort University Observatory, but, since five years, I have nothing to do with this institution. My scientific work preferably concerns Physics and Spectroscopy especially. I never had to do with earthquakes, sub-marine currentns, and wheather conditions. I never calculated at all the orbit of a comet, although, of course, I am quite able to do it.

It would be very intersting for me to find out the origin of the published nonsense, but, as I think, it will be very difficult to come to know the source which ''The Sunday Sun'' has drawn from.

Yours very truly,
Karl Wilh. Meissner.

ಬಿ. ವಿ. ರಾವ್,
ಎಡ್ವೊಕೇಟ್, ಉಡುಪಿ ,ಅವರಿಗೆ.
ಪ್ರಿಯ ಮಹಾಶಯ,

ತಾವು ದಯೆಯಿಟ್ಟು ಜುಲ್ಯಾ ೩೧, ೧೯೩೪ರಂದು ಬರೆದ ರಿಜಿಸ್ಟರ್ಡ್ ಪತ್ರವು ನಿನ್ನೆ ತಲಪಿತು. ಮದ್ರಾಸಿನ ''ಸಂಡೇ ಟ್ಯಾಮ್ಸ್'' ಪತ್ರಿಕೆಯಲ್ಲಿ ಪ್ರಕಟವಾದ ಆ ತಮಾಷೆ ಕತೆಯ ಕುರಿತು ತಾವು ಬರೆದಿರುವ ಪತ್ರವು ಬಹಳ ಕುತೂಹಲವನ್ನುಂಟುಮಾಡಿತು.

ಆ ಇಡೀ ಪ್ರಹಸನವು ಕೇವಲ ಮಾಯಾಜಾಲವೆಂಬುದನ್ನು ನಾನು ಮೊದಲೇ ಹೇಳಬೇಕಾಗಿದೆ. ಆ ಅರ್ಥ ಶೂನ್ಯ ಸುದ್ದಿಯನ್ನು ಪ್ರಕಟಿಸಿ ನನ್ನ ಯೋಗ್ಯ ವೈಜ್ಞಾನಿಕ ಹೆಸರನ್ನು ದುರುಪಯೋಗಗೊಳಿಸಿರುವುದಕ್ಕಾಗಿ ನನಗೆ ಆತ್ಯಾಶ್ಚರ್ಯವಾಗಿದೆ.

ನನ್ನ ಸರಿಯಾದ ಕ್ರಿಶ್ಚಿಯನ್ ಹೆಸರು ''ಕಾರ್ಲ್ ವಿಲ್‌ಹೆಲ್ಮ್'' ಎಂದಾದರೂ ಅನಾಮಧೇಯ ವ್ಯಕ್ತಿಯು ನನ್ನ ಹೆಸರಿನಲ್ಲಿ ಆ ಭವಿಷ್ಯವನ್ನು ಪ್ರಕಟಿಸಿರಬೇಕೆಂಬುದರಲ್ಲಿ ಸಂಶಯವಿಲ್ಲ.

'' ಕಾರ್ಲ್ '' ಎಂಬುದನ್ನು ''ಕರ್ಟ್'' ಎಂದು ಬದಲಾಯಿಸಿರುವುದೊಂದಲ್ಲದೆ ಸಾಮಾನ್ಯ ಮಟ್ಟಿಗೆ ಮಿಕ್ಕುಳಿದುವೆಲ್ಲಾ ನನಗೆ ಸಮನ್ವಯಿಸುತ್ತವೆ. ಹತ್ತು ವರುಷಗಳ ಹಿಂದೆ ನಾನು ಫ್ರಾಂಕ್‌ಫರ್ಟ್ ವಿಶ್ವವಿದ್ಯಾಲಯದ ವೇಧಶಾಲೆಯ ಪ್ರೊಫೆಸರನಾಗಿದ್ದುದು ಸತ್ಯ. ಆದರೆ ಕಳೆದ ಐದು ವರುಷಗಳಿಂದ ನನಗೂ ಆ ವಿಶ್ವವಿದ್ಯಾಲಯಕ್ಕೂ ಯಾವ ಸಂಬಂಧವೂ ಇಲ್ಲ. ನನ್ನ ವೈಜ್ಞಾನಿಕ ಚಟುವಟಿಕೆಗಳ ಪೈಕಿ ಪದಾರ್ಥವಿಜ್ಞಾನ ಮತ್ತು ಸ್ಪೆಕ್ಟ್ರೋಸ್ಕೊಪಿಗಳೇ ಪ್ರಾಮುಖ್ಯವಾಗಿವೆ.

(೧೦ನೇ ಪುಟ ನೋಡಿರಿ)

# ನಾಶವಾಗದಂತೆ ಮಾಡುವ ನಶ್ಯ!

ನಗೆ ಬರಹ - - - - ಬರೆದವ: 'ವಿಟ್ಟು'

ನಾವು ಭಾರತೀಯರು ಹಾಳಾದುದು ಹೇಗೆ ಗೊತ್ತುಂಟೆ? ನಾವು ನಾವೇ ಸ್ಪರ್ಧಿಸಿಕೊಂಡು. ರಾಮಯ್ಯ ಒಂದು ಗೊನೆ ಬಾಳೆ ಹಣ್ಣು ತಂದು ಮುಕ್ಕಾಲಿಗೆರಡರಂತೆ ಮಾರಲಿಕ್ಕಿಟ್ಟನೆಂದರಾಯಿತು-ಶ್ಯಾಮಯ್ಯ ಒಂದು ಎರಡು ಹಣ್ಣು ತಿಂದು ಒಂದು ದುಗ್ಗಾಣಿ ಕೊಟ್ಟು 'ಒಂದು ಪೈ ನಾಳೆ ಕೊಡುತ್ತೇನೆ' ಎಂದು ಹೇಳಿ ಹೋದರೆ ಅದೊಂದು ವ್ಯಾಪಾರ. ಅದಲ್ಲ, ಅವನೂ ಒಂದು ಗೊನೆ ತಂದು ಮುಕ್ಕಾಲಿಗೆ ಮೂರರಂತೆ ಮಾರಾಟಕ್ಕೇನೇ ಇಟ್ಟರೆ ವ್ಯಾಪಾರ ಹೇಗೆ ನಡೆಯಬೇಕಯ್ಯ? ಪ್ರತಿಯೊಂದು ವಿಷಯದಲ್ಲಿಯೂ ಹೀಗೆಯೇ. ಜಾತಿ ಜಾತಿಗಳೊಳಗೆ ಸ್ಪರ್ಧೆ, ನೆರೆಕೆರೆಯವರೊಳಗೆ ಸ್ಪರ್ಧೆ, ಗಂಡ (ಉಪ) ಗಂಡರೊಳಗೆ ಸ್ಪರ್ಧೆ, ಅಣ್ಣ ತಮ್ಮಂದಿರೊಳಗೆ ಸ್ಪರ್ಧೆ— ಇನ್ನೂ ಕೇಳುವಿರಾ, ಮೂಗು ಬಾಯಿಗಳೊಳಗೆ ಸ್ಪರ್ಧೆ! "ಎಲ್ಲಾ ಸತ್ಯ; ಕೊನೆಯದೊಂದು ಮಾತ್ರ ಸುಳ್ಳು" ಎಂದು ನೀವು ಹೇಳಬಹುದು. ಅಲ್ಲ, ಅದೂ ಸತ್ಯ. ಅದರಲ್ಲಿ ಗುಟ್ಟೇನು? ಮೂಗು ಬಾಯಿಗಳು ನಮ್ಮವುಗಳಾದರೆ, ಅವುಗಳ ದೋಷಗಳನ್ನು ಬರೆದು ಬಿಟ್ಟಲ್ಲಿ ಓದುವದೂ ಅದೇ ನಮ್ಮ ಬಾಯಿ; ಹತ್ತಿರವಿದ್ದು ಕೇಳುವದೂ ಇದೇ ಮೂಗು! ಆದ್ದರಿಂದ ಈ ಗುಟ್ಟು ರಟ್ಟಾಗುವ ಭಯವಿಲ್ಲ, ಹೇಳಿ ಬಿಡುತ್ತೇನೆ.

ಬಾಯಿ ಸಕ್ಕರೆ ತಿನ್ನುತ್ತದೆ, ವೀಳ್ಯ ಜಗಿಯುತ್ತದೆ, ಎಸಳೆಸಳು ಹೊಗೆ ಸೊಪ್ಪು ನುಂಗುತ್ತದೆ,—ತನಗಾಗದವರನ್ನು ಕಂಡೊಡನೆ ಹೂಂಕರಿಸುತ್ತದೆ. ಈ ಎಲ್ಲಾ ಸೌಭಾಗ್ಯಗಳಿಲ್ಲದ ಅದರ ನೆರೆಕೆರೆಯ ಮೂಗಿಗೆ ಬಾಯಿಯ ಮೇಲೆ ಮತ್ಸರ ಹುಟ್ಟಿ ಅದನ್ನು ಸ್ಪರ್ಧಿಸುವ ಮನಸಾಯಿತು. ಸರಿ, ತೊಡಗಿತು ಅದೇ ವ್ಯಾಪಾರಕ್ಕೆ. ಬಾಯಿ ಹೊಗೆಸೊಪ್ಪು



(ನಮ್ಮ ತಿಮ್ಮಣ್ಣಾಚಾರ್ರು.)

ಜಗಿದರೆ ಮೂಗು ಹೊಗೆಸೊಪ್ಪಿನ ನಶ್ಯ ನುಂಗಲು ಪ್ರಾರಂಭ; ಬಾಯಿ ಮಾತನಾಡಿದರೆ ಆ ನಸ್ಯ ಎಳಕೊಳ್ಳುವಾಗಲಾದರೂ 'ಗುರ್', ಎಂದು ಮೂಗೂ ಹೂಂಕರಿಸಲು ಸುರು. ಇದು ನಮ್ಮ ಹಿಂದುಸ್ಥಾನದಲ್ಲಿ ನೆರೆಕರೆಯವರೊಳಗಿರುವಂತಹ ಧರ್ಮವಷ್ಟೆ. ಬಾಯಿ ಮತ್ತು ಮೂಗು ಹತ್ತಿರಹತ್ತಿರವಿರಬಹುದಂತೆ— ಒಂದನ್ನೊಂದು ಅಣಕಿಸಬಾರದು, ಒಂದರೊಡನೊಂದು ಸ್ಪರ್ಧಿಸಬಾರದು,ಎಂದು ಅಧರ್ಮ ಭೋಧೆ ಮಾಡಿದರೆ ಫಲವಿಲ್ಲವೆನ್ನಿ. ಅಂತೂ ನಶ್ಯ ಎಳೆಯುವ ರೂಢಿಗೆ 'ನೆರೆಕರೆಯವರನ್ನು (ಉದ್ಯೋಗದಲ್ಲಿ ಮೇಲ್ಗೈಯಾದವರನ್ನು) ಸಮಾನತೆಯಿಂದ ನೋಡು' ಎಂಬ ನೀತಿಯು ನಮ್ಮ ಅಂಗಾಂಗಗಳಲ್ಲಿಯೂ ಈ ರೀತಿ ಆಚರಣೆಯಲ್ಲಿರುವದೇ ಕಾರಣ.

ಹಿಂದುಸ್ಥಾನದ ಜನರು ಹೇಗೂ ಒಬ್ಬರನ್ನೊಬ್ಬರು ಪ್ರೀತಿಸುವ ಕ್ರಮವಿಲ್ಲವಷ್ಟೆ. ಇನ್ನು ಹಿಂದೀಯ ಪತ್ರಿಕೆಗಳಾದರೂ ಭಾರತೀಯರನ್ನು ಪ್ರೀತಿಸುವ ಕ್ರಮವುಂಟೆ? ಅದೂ ಇಲ್ಲ. ನೋಡಿ, ಇತ್ತೀಚೆಗಿನ(ತಾರೀಕು ನೆನಪಿಲ್ಲವಲ್ಲಾ,ಒಂದುವಿಷಯದಯಾವುದಾದರೊಂದು ಭಾಗವನ್ನು ಮರೆತು ಬಿಡುವದು ನನ್ನ ಕ್ರಮ. ಪತ್ರಿಕೆ ಮಾಡಿದ ಅನ್ಯಾಯವನ್ನು ಮರೆಯಲು ಅಸಾಧ್ಯವಾದುದರಿಂದ ತಾರೀಕನ್ನು ಮರೆತೆ) 'ಹಿಂದು'ವಿನಲ್ಲಿ ಲಂಡನಿನವನೊಬ್ಬನ ಫೋಟೋ ಬಂದಿತ್ತು. ಕಾರು ಮೊದಲಾದ ವಾಹನಗಳನ್ನು ಮಿತ ತಪ್ಪಿ ಓಡಿಸಿ ಜನರ ಕೈಕಾಲು ಮುರಿಯುವದನ್ನು ನಿಷೇಧಿಸಲು ಅಲ್ಲಿಯವರು ವಿರುದ್ಧ ಪ್ರದರ್ಶನ ನಡೆಸಿ ಮೆರವಣಿಗೆ ತೆಗೆದಿದ್ದರು. ಮೆರವಣಿಗೆಯ ಮುಂಭಾಗದಲ್ಲಿ ಒಂದು ಕೈಗಾಡಿ. ಗಾಡಿಯಲ್ಲಿ ಕಾರಿನಡಿಗೆ ಬಿದ್ದು ಜಖಂ ಹೊಂದಿದವನೊಬ್ಬನು 'ನನ್ನ ತಮ್ಮ ಕಾರಿನಡಿಗೆ ಬಿದ್ದು ಸತ್ತ; ನಾನು ತೀವ್ರಜಖಂ ಗೊಂಡೆ' ಎಂದು ಬರೆದ ಬೋರ್ಡನ್ನು ಹಚ್ಚಿಕೊಂಡು ಕುಳಿತಿದ್ದ. ಅವನ ಫೋಟೋವನ್ನು ಆ ಲಂಡನಿನವನ ಫೋಟೋವನ್ನು ಅಷ್ಟು ದೊಡ್ಡದು ಮಾಡಿ ಹಿಂದೂ ಪತ್ರಿಕೆ ಪ್ರಕಟಿಸಿತಲ್ಲಾ-ಇಲ್ಲಿ ಅಂತ

ಹದಕ್ಕೆ ಏನು ಬರಗಾಲ ಬಿದ್ದಿದೆ? ಇಲ್ಲಪ್ಪಾ ಇಲ್ಲ, ಹಿಂದೀಯರಲ್ಲಿ ಸ್ವದೇಶಾಭಿಮಾನ, ಸ್ವಜನಾಭಿಮಾನ ಇಲ್ಲವೇ ಇಲ್ಲ! "ಪ್ರತಿಯೊಬ್ಬರೂ ಅನ್ಯರಿಗೆ ಬೋಧಿಸುವದು ಮಾತ್ರ; ಅಲ್ಲವಾದರೆ ಅಂತಹ ಹಿಂದೀಯರ ಚಿತ್ರವನ್ನು ಅಂತರಂಗವು ಪ್ರಕಟಿಸಬಹುದಲ್ಲ!' ಎಂದು ನೀವು ಕೇಳುತ್ತೀರೇನು? ನೋಡಿ ಆ ಪುಟದಲ್ಲಿ, ನಮ್ಮೂರಿನವರಾದ ತಿಮ್ಮಣ್ಣಾಚಾರ್ಯರ ಫೋಟೊ. ಅವರು ರಟ್ಟಿನ ಬೋರ್ಡು ಮಾಡಿ ಲಂಡನಿನವನಂತೆ ಹಚ್ಚಿಕೊಂಡಿಲ್ಲ ನಿಜ. ಆದರೆ ಅದು ಲಂಡನ್– ಇದು ನಮ್ಮೂರು. ಆಚಾರ್ರ ಕೈ, ಭುಜ, ಎದೆ, ಹೊಟ್ಟೆಯಲ್ಲಿ ಮೂರು ಮೂರು ನಾಮ (ತ್ರಿಪುಂಡ್ರ)ಗಳಿವೆಯಲ್ಲಾ- ಅವು ಬೋರ್ಡಿನ ಬದಲಿಗೆ. ಹೇಗೆಂದು ಅರ್ಥವಾಗಲಿಲ್ಲವೆ? ಆಯ್ತು, ಅದನ್ನೂ ಹೇಳುತ್ತೇನೆ.

ತಿಮ್ಮಣ್ಣಾಚಾರ್ರಲ್ಲಿ, ಹಿರಿಯರು ಕೂಡಿಸಿಟ್ಟಿದ್ದಕ್ಕೆ ಅವರೂ ಸೇರಿಸಿಕೊಂಡದ್ದು ಕೂಡಿ ಏಳೆಂಟು ಸಾವಿರ ರೂಪಾಯಿ ಜಮೆಯಿತ್ತು. ಅದನ್ನೆಲ್ಲಾ ನಾನಾವಿಧದ ಬಡ್ಡಿಯಲ್ಲಿ ಸಾಲಕೊಟ್ಟಿದ್ದರು. ದುಡ್ಡಿನ ವಹಿವಾಟನಿಂದಾಗಿ ಆಚಾರ್ರು ನಮ್ಮೂರಿಗೆ ಬಲಭುಜದಂತಿದ್ದರು. ಪ್ರಥಮತಃ ಮಾದಣ್ಣ ಸೆಟ್ಟಿ ಏನೇನೋ ಕಾನೂನು ಹುಡುಕಿ ರೂಪಾಯಿ ೧೦೦೦ಕ್ಕೆ ಆಚಾರ್ರಿಗೆ ಮೂರು ನಾಮ ಎಳೆದ. ಅಂದಿನಿಂದ ಸಾಲಕೊಡುವದನ್ನು ಬಿಟ್ಟು ಊರಿನ ಭುಜಪ್ರಾಯರೆಂಬ ಕೀರ್ತಿಯನ್ನು ಆಚಾರ್ರು ಕಳಕೊಂಡರು. ಭುಜಗಳಲ್ಲಿರುವ ತ್ರಿಪುಂಡ್ರದ ಅರ್ಥವು ಅದೇ. ಮರುವರ್ಷವೇ ಕಾಮೇಶ್ವರ ಭಟ್ಟ ರೂ. ೨೦೦೦ವನ್ನು ತಿಂದುಹಾಕಿ ಆಚಾರ್ರ ಕೈಕಟ್ಟಿಸಿ ಬಿಟ್ಟ; ಆಚಾರ್ರ ಕೈಗಳಲ್ಲಿರುವ ಮೂರು ನಾಮವೆಳೆದವನ ಹೆಸರು ತಿಳಿಯಿತಲ್ಲ. ಇದನ್ನು ತಿಳಿದು ದಾಮೋದರ ಶೆಣೈ ಒಂದೂವರೆ ಸಾವಿರ ರೂಪಾಯಿಗಳಿಗೆ ನಾಮವೆಳೆಯುವ ಆಲೋಚನೆಯಲ್ಲಿದ್ದಾನೆಂದು ತಿಳಿದ ಆಚಾರ್ರು 'ಪ್ರಾಣವಿದ್ದರೆ ತಿಂದು ಹಾಕಲು ಬಿಡಲಿಕ್ಕಿಲ್ಲ' ಎಂದು ಎದೆತಟ್ಟಿಕೊಂಡು ಕೂಡಲೇ ವ್ಯಾಜ್ಯಮಾಡಿ ಎದೆಕೊಟ್ಟು ಸಾಧನೆ ನಡೆಸಿದರು. ಅದೂ ಗುಳುಮ್ಮಾಯಿತು. ಆಚಾರ್ರ ಎದೆಗೇನೆ ಮೂರುನಾಮ ಬಿದ್ದದ್ದು ಹಾಗೆ. ಕೊನೆಗುಳಿದ ಅವರ ಹೊಟ್ಟೆಯ ಪಾಡಿಗೆ ಬೇಕಾಗುವ ಮೂರೂವರೆ ಸಾವಿರ ರೂಪಾಯಿ, ವಾಸುದೇವ ಪುರಾಣಿಕರಿಂದ ಬರುವದಿತ್ತು. ಅವರು ಹೇಳದೆ ಕೇಳದೆ ವೈಕುಂಠ ಯಾತ್ರೆ ಬೆಳೆಸಿ ಆಚಾರ್ರ ಹೊಟ್ಟೆಗೇನೆ ಮೂರುಬರೆ ಎಳೆದರು; ತಿಮ್ಮಣ್ಣಾಚಾರ್ರ ಹೊಟ್ಟೆಯಮೇಲೆ ಕಾಣುತ್ತದಲ್ಲಾ ಮೂರು ನಾಮ! ಅವರು ಈ ಮೂರು ನಾಮುಗಳನ್ನು ತೋರಿಸುತ್ತಾ ಈಗ ಬೀದಿ ಬೀದಿ ತಿರುಗುತ್ತಿದ್ದಾರೆ–ಯಾವ ಪತ್ರಿಕೆಯೂ ಈವರೆಗೆ ಅವರ ಭಾವಚಿತ್ರ ಪ್ರಕಟಿಸಿದುದಿಲ್ಲ. ಲಂಡನಿನಲ್ಲಿ ಇದಕ್ಕಿಂತ ಸಣ್ಣ ಬೋರ್ಡು ಹಚ್ಚಿಕೊಂಡು ತಿರುಗಿದುದನ್ನಾದರೆ ಪ್ರಕಟಿಸುತ್ತವೆ. ಅಬ್ಬಾ ಭಾರತೀಯರ ಬುದ್ಧಿಯೆ!

ಇನ್ನು ತಿಮ್ಮಣ್ಣಾಚಾರ್ರ ದೇಹದಲ್ಲಿ ಮುಂಡವನ್ನಷ್ಟೇ ವರ್ಣಿಸಿ ಬಿಟ್ಟುದನು ನೋಡಿ "ರುಂಡವೇನಾಯಿತಯ್ಯಯ್ಯೊ!" ಎಂದು ಗಾಬರಿಯಾಗಬೇಡಿ. ಅವರ ರುಂಡವನ್ನು ಮುಂಡದಿಂದ ಬೇರ್ಪಡಿಸಿದುದು ಕಂಠದ ರುದ್ರಾಕ್ಷೀಸರ ಹೊರತು ನಾನಲ್ಲ. ದಿನಂಪ್ರತಿ ಒಂದೊಂದು ಮುಕ್ಕಾಲಿನ ನಸ್ಯವನ್ನು ತುಂಬಿಸಿಡುವ ಸಪಾಯಿ ಬುರುಡೆಯಂತಿರುವ ಬೋಳುತಲೆ 'ಬುರುಡೆಗೊಂದು ಬೂಚು' ಎಂಬಂತೆ ಅದರ ತುದಿಯಲ್ಲಿ ಒಂದು ಸೂಡಿ. "ಕೊಟ್ಟ ಸಾಲವನ್ನು ವಸೂಲಿ ಮಾಡಲಾಗದವ ಗಂಡುಸಲ್ಲ" ಎಂಬ ತತ್ವವನ್ನು ಸಾರುವಂತಿರುವ ಮೀಸೆಯಿಲ್ಲದ ಮುಖ–ಇದು ಆಚಾರ್ರ ರುಂಡ.

ತಿಮ್ಮಣ್ಣಾಚಾರ್ರಿಗ ಭೋಜನ, ದಕ್ಷಿಣೆಯಿಂದಲೇ ದಿನದೂಡುತ್ತಿದ್ದಾರೆ. ದಿನಕ್ಕೊಂದು ಪಾವಾಣೆಯ ನಸ್ಯವನ್ನು ಮೂಗಿನ ದ್ವಾರಾ ಸೇರಿಸುತ್ತಾ' ಮುಂದಿನ ಭಾವೀ ಯುದ್ಧಕ್ಕೆ ತಯಾರಾಗುತ್ತಿದ್ದಾರೆ. ಪಾಶ್ಚಿಮಾತ್ಯ ದೇಶದವರು 'ಗ್ಯಾಸ್ ಮಾಸ್ಕ'ಗಳನ್ನು ಒದಗಿಸಿಕೊಟ್ಟು ಮನುಷ್ಯರ ಮುಸುಡನ್ನು ಊರ ಹಂದಿಗಳ ಮುಸುಡಾಗಿ ಮಾರ್ಪಡಿಸಿಯಾದರೂ ವಿಷವಾಯುವನ್ನು ತಡೆಯುವ ಹಂಚಿಕೆಯನ್ನು ಭರದಿಂದ ನಡೆಸುತ್ತಿರುವರಷ್ಟೆ. ಹಿಂದುಸ್ಥಾನದಂತಹ ಸನಾತನ ಧರ್ಮಮಯ ದೇಶಕ್ಕೆ ಆ ಕೊಳಕು ಪದ್ಧತಿಯು ಅಂಗೀಕಾರ್ಯವಲ್ಲ. ಸನಾತನಿಗಳು ಹೇಳುವಂತೆ ನಮ್ಮ ಧರ್ಮವೇ ನಮ್ಮನ್ನು ಕಾಪಾಡಬೇಕು– ಅದು ಕಾಪಾಡಿಯೇ ಬಿಡುತ್ತದೆ. ನಸ್ಯ ಸೇದುವದು ಭಾರತೀಯರ ಧರ್ಮವಷ್ಟೆ, ಈ ಧರ್ಮದ ಬಲದಿಂದ ವಿಷವಾಯುವಿನ ಉಪಟಳವನ್ನು ಖಂಡಿತವಾಗಿಯೂ ನಾವು ತಡೆಯಬಲ್ಲೆವು.

ಅರಳಿ ಘಮುಘಮಿಸುವ ತಾವರೆಯ ಹೂವನ್ನಾಗಲೀ, ಕೊಳೆತು ನಾರುವ ಹೂವಿನ ಮಿಡಿಯನ್ನಾಗಲೀ, ನಸ್ಯದ ಮೂಗಿನ ಹತ್ತಿರ ಹಿಡಿದರೆ ವಾಸನೆಯೇ ಹತ್ತುವದಿಲ್ಲವಂತೆ- ಇನ್ನು ವಿಷಗಾಳಿಯೇನು ಮಹಾ? ಇಲ್ಲಯ್ಯಾ, ವಿಷಗಾಳಿಯ ಹೆದರಿಕೆಯೇ ನಮಗಿಲ್ಲ; ಮಿಕ್ಕ ದೇಶಗಳವರು ಮಾಡಿದಂತೆ ನಾವೂ ಮೊನ್ನೆ ಅದರ ಪರೀಕ್ಷೆಮಾಡಿ ನೋಡಿದ್ದೇವೆ. ಹೇಗೆ ಕೇಳುವಿರಾ? ಮೊನ್ನೆ ಮದುವೆ ಚಪ್ಪರದಲ್ಲಿ ಅಕಸ್ಮಾತ್ 'ಇದೆಲ್ಲಿಯ ವಿಷಗಾಳಿಯಪ್ಪಾ" ಎಂದು ಹೆಚ್ಚಿನವರು ಮೂಗು ಮುಚ್ಚಿಕೊಂಡೂ ಅರೆಜೀವವಾಗಿ ಹೋದರು. ನಮ್ಮ ತಿಮ್ಮಣ್ಣಾಚಾರ್ರು ಮತ್ತು ಅವರಂತಹ ಇತರ ನಸ್ಯಧಾರಿಗಳು ಮಾತ್ರವೇ ಆ ಬಾಧೆಗೊಳಗಾಗಲಿಲ್ಲ ನೋಡಿ!

ನಶ್ಯ-ಎಂತಹ ಅನ್ವರ್ಥನಾಮ! ವಿಷಗಾಳಿಯಿಂದ ಕೂಡಿದ ಮುಂದಿನ ಯುದ್ಧದಲ್ಲಿ ನಾವು ನಾಶವಾಗದಂತೆ ಮಾಡುವದೇ ನಶ್ಯ. ಈ ಹೆಸರನ್ನಿಟ್ಟ ಜೋಯಿಸರನ್ನು ಹೊಗಳಬೇಕಯ್ಯ! ನೋಡಿ, ಆ ಕಾಲದಲ್ಲಿ ಮೂರು ಅಡಿ ಜಾಗವನ್ನು ದರ್ಖಾಸ್ತಿಗೆ ಪಡಕೊಂಡು, ಮನೆಕಟ್ಟಿ ನಿಂತು ಈಗ ನಮ್ಮ ಇಡೀ ಊರನ್ನು ಬಗಲಿಗೆ ಹಾಕಿರುವ ಆ ವಾಮನರಾಯರಿದ್ದಾರಲ್ಲ-ಅವರಿಗೆ ಹುಟ್ಟಿದಾಗಲೇ 'ವಾಮನ' ಎಂಬ ಹೆಸರಿಡಬೇಕಾದರೆ ಜೋಯಿಸರೆಷ್ಟು ಗಟ್ಟಿಗರಿರಬೇಕು. ಹಾಗೆಯೇ ವಿಷಗಾಳಿಯನ್ನು ಕಂಡುಹಿಡಿಯುವ ಮೊದಲೇ ನಮ್ಮ ಈ 'ಹುಡಿ'ಗೆ 'ನಶ್ಯ' ಎಂಬ ಹೆಸರು ಹಾಕಿದ್ದರಲ್ಲಾ-ಏನು ಕಾರ್ಣಿಕವಪ್ಪಾ ಇದು!

(೭ನೆ ಪುಟದಿಂದ ಮುಂದುವರಿದುದು)

ಭೂಕಂಪ, ಸಾಗರಧಾರೆ ಅಥವಾ ಹವಾಮಾನಗಳ ಪರಿಸ್ಥಿತಿಯ ಕುರಿತು ನಾನಾವ ಶೋಧನೆಯನ್ನೂ ಮಾಡಲಿಲ್ಲ. ಧೂಮಕೇತುವಿನ ಗತಿಯನ್ನು ಗುಣಿಸಲು ಶಕ್ತನಾದರೂ ನಾನು ಇಷ್ಟರ ತನಕ ಗುಣಿಸಲೇ ಇಲ್ಲ.

ಆ ಅರ್ಥಶೂನ್ಯ ಪ್ರಕಟನೆಯ ಮೂಲವನ್ನು ತಿಳಿಯಲು ನಾನಿಚ್ಛಿಸುವುದಿದ್ದರೂ "ಸಂಡೇ ಸನ್" (ಇದು 'ಸಂಡೇ ಟ್ಯಾಮ್ಸ್' ಎಂದಾಗಿರಬೇಕು-ಸಂ. ಅಂ) ಪತ್ರಿಕೆಯು ಎಲ್ಲಿಂದ ಆ ವಾರ್ತೆಯನ್ನು ಸಂಗ್ರಹಿಸಿತೆಂಬುದನ್ನು ತಿಳಿಯುವುದು ಕಷ್ಟಸಾಧ್ಯವೆಂದು ನಾನು ಭಾವಿಸುತ್ತೇನೆ.

ತಮ್ಮ ಅತ್ಯಂತ ವಿಶ್ವಾಸಿ,

(ಸಹಿ) **ಕಾರ್ಲ್ ವಿಲ್‌ಹೆಲ್ಮ್**
**ವಿೂಸ್ನರ್**

# ಅಪರ ಜೀವನ

ಬರೆದವ:

"ಅಜ್ಞಾತ"

ನಾನು ಸತ್ತದ್ದು ೧೩ನೇ ಆಗಸ್ಟ್ ೧೯೩೧ರಲ್ಲಿ. ನನ್ನ ಜೀವನದಲ್ಲಿ ೧೩ನೆಯ ತಾರೀಕೆಂದರೆ ಬಹಳ ಮಹತ್ವದ್ದಾಗಿತ್ತು. ನಾನು ಹುಟ್ಟಿದ್ದು ಸಪ್ಟಂಬರ ಹದಿಮೂರರಲ್ಲಿ. ನನಗೆ ಮದುವೆಯಾದದ್ದು ನವಂಬರ್ ಹದಿಮೂರರಲ್ಲಿ. ನನ್ನ ಹೆಂಡತಿ ಸತ್ತದ್ದು ಜನವರಿ ಹದಿಮೂರರಲ್ಲಿ.

ಸಾಯುವಾಗ ನನಗೆ ಮುವ್ವತ್ತೆಂಟು ವರ್ಷ ವಯಸ್ಸು. ಆದರೆ ಜೀವನದ ಆಸೆ ಅಭಿಲಾಷೆಗಳು ಇನ್ನೂ ತೀರಿದ್ದಿಲ್ಲ. ಹೆಂಡತಿ ಸತ್ತು ಒಂದು ವರುಷವಾಗಿತ್ತಷ್ಟೆ. ಇನ್ನೊಂದು ಮದುವೆಯ ಯೋಚನೆಯಲ್ಲಿದ್ದೆ. ಆಗ ನನಗೆ ಕಾಯಿಲೆ ಬಂತು.

ಮನೆಯಲ್ಲಿ ಬೇರೆ ಯಾರೂ ಇಲ್ಲದೇ ಇದ್ದದ್ದರಿಂದ ನನ್ನ ದೊಡ್ಡಪ್ಪನ ಮನೆಗೆ ಹೋಗಿ ಬೀಳಬೇಕಾಯಿತು. ಹೆಸರಿಗೇನೋ ಅವರು ನನ್ನ ಔಷಧ ಉಪಚಾರಗಳನ್ನು ಬಹಳ ಆದರದಿಂದ ಮಾಡುತ್ತಿದ್ದರು. ಆದರೆ ನಾನು ಬದುಕಬೇಕೆಂದು ಅವರಿಗೆ ಎಳ್ಳಷ್ಟೂ ಇಚ್ಛೆಯಿದ್ದಿಲ್ಲ. ಒಳಗೊಳಗೆ ಅವರು ಮಾತಾಡುತ್ತಿದ್ದುದನ್ನು ನಿದ್ರೆಯ ನಟನೆಯಿಂದ ನಾನು ಕೇಳುತ್ತಿದ್ದೆ. ನನ್ನ ಸಾವನ್ನು ನನ್ನ ದೊಡ್ಡಪ್ಪನ ಮಗನು ಹಾರೈಸಲು ಕಾರಣವಿತ್ತು. ಏಕೆಂದರೆ ನನಗೆ ೧೦,೦೦೦ ರೂಪಾಯಿಯ ವಿಮೆಯಿತ್ತು. ನಾನು ಸತ್ತಲ್ಲಿ ನಿಸ್ಸಂತತಿಯಾದ ನನ್ನ ಈ ಹಣವು ಆತನಿಗೆ ಸಿಕ್ಕುವುದು ನಿಶ್ಚಯವಾಗಿತ್ತು.

ಏನು ಮಾಡಲಿ? ಇಷ್ಟೆಲ್ಲಾ ತಿಳಿದೂ ನಾನು ಅವರಲ್ಲಿಯೇ ಬಿದ್ದಿರಬೇಕಾಗಿತ್ತು. ನನಗೆ ಬೇರೆ ಗತಿ ಇರಲಿಲ್ಲ.

ನಾನು ಸತ್ತ ಸಮಯವು ನನಗೆ ಸರಿಯಾಗಿ ನೆನಪಿದೆ. ಮೂರೂಸಂಜೆಯ ಮಬ್ಬು ಅರ್ಧನುರ್ಧ ಕವಿದಿತ್ತು. ನನ್ನ ಅಂಗಾಂಗಗಳಲ್ಲಿ ನಿಶ್ಚೀತನದ ಕೋಡು ಪ್ರವಾಹವು ಹರಿದಿತ್ತು. ಡಾಕ್ಟರರು ಬಂದು ನೋಡಿದ್ದೂ ಆಯಿತು. ನಿಷ್ಪ್ರಯೋಜಕವೆಂದು ಅವರ ಇತ್ಯರ್ಥವೂ ಆಯಿತು. ನನ್ನ ನಾಲಗೆ ಅಲ್ಲಾಡುತ್ತಿದ್ದಿಲ್ಲ. ಕಿವಿ ಚೆನ್ನಾಗಿ ಕೇಳುತ್ತಿದ್ದಿಲ್ಲ. ಕಣ್ಣುಎವೆ ಮುಚ್ಚಲೂ ಸಹ ಶಕ್ತಿಯಿಲ್ಲದೆ ಹಾಗೆಯೇ ತೆರೆದಿದ್ದೆ. ಡಾಕ್ಟರರ ಇತ್ಯರ್ಥವನ್ನು ತಿಳಿದು ನನ್ನ ದೊಡ್ಡಪ್ಪನ ಮಗ ಒಳಗೆ ಬಂದಾಗ ಆವನ ಮುಖ ಅರಳಿತ್ತು. ನನ್ನಲ್ಲಿ ಶಕ್ತಿ ಇರುತ್ತಿದ್ದರೆ ಆಗಲೇ ಆತನ ಕೊರಳು ಹಿಸುಕಿ ಬಿಡುತ್ತಿದ್ದೆ.

ನನ್ನ ಪ್ರಾಣವು ಕೊಂಚ ಕೊಂಚವಾಗಿ ಹೊರಟು ಹೋಗುತ್ತಿದ್ದ ಆ ಅನುಭವವನ್ನು ನೆನೆದರೆ ಈಗಲೂ ಮೈ ಜುಂ ಎನ್ನುತ್ತದೆ.

*     *     *     *     *

ಹೀಗೆಷ್ಟು ದಿನ ಸತ್ತಿದ್ದೆನೋ ನನಗೇನೂ ತಿಳಿದಿದ್ದಿಲ್ಲ. ಸತ್ತಮೇಲಿನ ನನ್ನ ಮೊದಲನೆಯ ನೆನಪೆಂದರೆ ಹಂಪನಕಟ್ಟೆಯಲ್ಲಿ ನಾನು ನಡೆಯುತ್ತಿದ್ದುದು. ನಾನು ಸತ್ತು ಬಹಳ ದಿವಸಗಳಾಗಿರಬೇಕೆಂದು ನನಗೆನಿಸಿತು. ನನ್ನ ಹಿಂದಿನ ನೆನಪು ಸರಿಯಾಗಿದ್ದಲ್ಲಿ ನಾನು ಸತ್ತಾಗ ಹಂಪನಕಟ್ಟೆ ಇಷ್ಟೊಂದು ಪ್ರಾಮುಖ್ಯ ಸ್ಥಳವಾಗಿದ್ದಿಲ್ಲ. ಇದೇನು ಚೋದ್ಯವೆಂದು ಆಶ್ಚರ್ಯಪಡುತ್ತಾ ನಾನು ಹಂಪನಕಟ್ಟೆ ಬಸ್ ಸ್ಟೇಂಡಿನ ಹತ್ತಿರ ಬಂದೆ. ಹಿಂದೆ ಅಲ್ಲಿ ಇಲ್ಲದಿದ್ದ ಕಟ್ಟೋಣಗಳು, ಜನಸಂದಣಿ ಕಣ್ಣಿಗೆ ಬಿತ್ತು. ಎಲ್ಲಕ್ಕಿಂತ ಹೆಚ್ಚು ನನ್ನ ಮನಸ್ಸನ್ನಾಕರ್ಷಿಸಿದ್ದು ಶ್ರೀ ಕೃಷ್ಣ ಭವನದ ಭವ್ಯವಾದ ಕಟ್ಟಡ. ಸೀದಾ ಒಳಗೆ ನಡೆದು ಒಂದು ಮೇಜಿನ ಬಳಿ ಕುಳಿತೆ. ಮಧ್ಯಾಹ್ನದ ಹೊತ್ತಾಗಿತ್ತು. ಬಹಳ ಬಾಯಾರಿಕೆಯೂ ಆಗಿತ್ತು. ಸರ್ವರ್ ಬಂದು ಕೇಳಿದ—"ಏನು ತರಲಿ?" ಲೆಮನ್ ಕ್ರಶ್ ಮತ್ತು ಫ್ರುಟ್ ಸಾಲದ್ ತೆಗೆದುಕೊಂಡೆ. ಆದನ್ನು ಮುಗಿಸಿದಾಗ ಬಿಲ್ ಬಂತು. ನೋಡಿದೆ—ತಾರೀಕು ೧೩—೮—೧೯೩೭.

ನಾನು ಸತ್ತು ಆರು ವರ್ಷಗಳಾಗಿತ್ತು! ಮೆಲ್ಲ ಮೆಲ್ಲನೆ ಹಳೆಯ ನೆನಪುಗಳೆಲ್ಲವೂ ಒಂದೊಂದಾಗಿ ನನ್ನ ತಲೆಯನ್ನು ತುಂಬಿಕೊಂಡವು. ನನ್ನ ದೊಡ್ಡಪ್ಪನ ಮಗ—ನಾನು ಸಾಯುವಾಗ ಆತನಿಗಾದ ಸಂತೋಷ—ನನಗೆ ಆಗ ಆದ ಅನುಭವ—

ಈ ಕಹಿ ನೆನಪುಗಳೊಡನೆ ದ್ವೇಷವೂ ನನ್ನೆದೆಯಲ್ಲಿ ಪ್ರಜ್ವಲಿಸಹತ್ತಿತು ಸಾಧ್ಯವಾದರೆ ಅವನನ್ನು ಕೊಂದು ಬಿಡಬೇಕೆನಿಸಿತು. ಹೊಟೆಲಿನವನಿಗೆ ಹಣವನ್ನು ಕೊಟ್ಟು ನೆಟ್ಟಗೆ ಹೂ ಮಾರ್ಕೆಟಿನ ದಾರಿ ಹಿಡಿದೆ. ನನ್ನ ದಾಯಾದಿ ಇದ್ದದ್ದು ಅಲ್ಲಿಯೇ.

ಅವನಿದ್ದ ಮನೆಗೆ ಹೋದೆ. ಅದರ ಕೆಲವು ಭಾಗಗಳನ್ನು ತೆಗೆದು ಪುನಃ ಕಟ್ಟಿದ್ದರು. ಹೋಗಿ ಬಾಗಿಲು ತಟ್ಟಿದೆ. ನನಗೆ ಗುರುತಿಲ್ಲದಾಕೆಯೊಬ್ಬಳು ಬಾಗಿಲು ತೆರೆದಳು.

"ಶ್ರೀನಿವಾಸ ಶಾಸ್ತ್ರಿಗಳು ಇದ್ದಾರೆಯೆ?" ನಾನು ಕೇಳಿದೆ

"ಇದು ಶ್ರೀನಿವಾಸ ಶಾಸ್ತ್ರಿಗಳ ಮನೆಯಲ್ಲ—ಹಾಂ. ಆ ಹೆಸರಿನವರೊಬ್ಬರು ಇಲ್ಲಿ ಇದ್ದರು. ಈಗ ಅವರು ಈ ಮನೆಯನ್ನು ಮಾರಿ ಪೆಂಟ್ಲ್ಯಲಂಡ್ ಪೇಟೆಯಲ್ಲಿ ಹೊಸ ಮನೆಯನ್ನು ಕಟ್ಟಿಕೊಂಡಿದ್ದಾರೆ."

ಸರಿ. ಪೆಂಟ್‌ಲೆಂಡ್ ಎಕ್ಸ್‌ಟೆನ್ಶನಿನ ದಾರಿ ಹಿಡಿದೆ.

ಸಿಕ್ಕಿದವರೊಡನೆ ಕೇಳಿ ಕೇಳಿ ಶ್ರೀನಿವಾಸ ಶಾಸ್ತ್ರಿ (ನನ್ನ ದಾಯಾದಿ)ಯ ಮನೆಯನ್ನು ಗೊತ್ತುಮಾಡಿಕೊಂಡೆ. ದೊಡ್ಡ ಬಂಗಲೆ ಅದು. ನನ್ನ ವೈರ ಮತ್ತಷ್ಟು ಹೆಚ್ಚಿತು. ನನ್ನ ವಿಮೆಯ ಹಣದಿಂದ ಈತ ಇಷ್ಟು ಸುಖ ಪಡೆಯುತ್ತಾ ಇದ್ದಾನೆ!

ಅಷ್ಟು ಹೊತ್ತಿಗೆ ಎರಡುಗಂಟೆಯಾಗಿತ್ತು. ದರ್ಪದಿಂದ ಶ್ರೀನಿವಾಸನ ಬಂಗಲೆಯ ಪೋರ್ಟಿಕೋದ ಮೇಲೆ ಹೋದೆ. ಯಾರೂ ಇರಲಿಲ್ಲ, ನಡುಮನೆಯ ಬಾಗಿಲು ತಟ್ಟಿದೆ. ಒಬ್ಬಳು ಕೆಲಸದಾಕೆ ಬಾಗಿಲು ತೆರೆದಳು.

"ಶ್ರೀನಿವಾಸ ಶಾಸ್ತ್ರಿ ಇದ್ದಾನೆಯೇ" ದರ್ಪದಿಂದ ನಾನು ಕೇಳಿದೆ.

"ಇದ್ದಾರೆ, ಅವರಿಗೆ ಸ್ವಲ್ಪ ಸೀಕು. ಉಪ್ಪರಿಗೆಯಲ್ಲಿ ತನ್ನ ಕೋಣೆಯಲ್ಲಿ ಮಲಗಿದ್ದಾರೆ.

"ಮನೆಯಲ್ಲಿ ಮತ್ತೆ ಯಾರೂ ಇಲ್ಲವೆ?"

"ಇಲ್ಲ; ಅಮ್ಮ ರಾಜಾಶಾಸ್ತ್ರಿಗಳಲ್ಲಿಗೆ ಉಪನಯನಕ್ಕೆ ಹೋಗಿದ್ದಾರೆ."

"ಶ್ರೀನಿವಾಸನಿಗೆ ಹೇಳು. ನಿನ್ನ ಹಳೇ ಸಂಬಂಧಿಕರೊಬ್ಬರು ಮದ್ರಾಸಿನಿಂದ ಬಂದಿದ್ದಾರೆ. ಒಳಗೆ ಬರಬಹುದೇ ಎಂತ."

ಹುಡುಗಿ ಹೆದರಿ ಹೆದರಿ ಉಪ್ಪರಿಗೆಯ ಮೇಲೆ ಹೋದಳು. ನಾನು ಸುತ್ತಲೂ ನೋಡಿದೆ. ನನ್ನ ಪೆಟ್ಟಿಗೆ, ನನ್ನ ಟ್ರಂಕು, ನನ್ನ ಮೇಜು, ನನ್ನ ಕುರ್ಚಿಗಳು! ಹಗೆ ಮತ್ತಷ್ಟು ಏರಿತು.

ಹುಡುಗಿ ಕೆಳಗೆ ಬಂದು ಬರಬಹುದೆಂದಳು. ನಾನು ಉಪ್ಪರಿಗೆಯ ಮೇಲೇರಿದೆ, ಆಕೆ ಬಾಗಿಲು ಮುಚ್ಚಿ ಮನೆಯ ಹಿಂದುಗಡೆ ಹೊರಟು ಹೋದಳು.

ಶ್ರೀನಿವಾಸ ಪಲಂಗದ ಮೇಲೆ ಮಲಗಿದ್ದ; ನಾನು ಬಾಗಿಲು ದೂಡಿಕೊಂಡು ಒಳಗೆ ಹೋದೆ. ನಾನು ಒಳಗೆ ಬಂದೊಡನೆಯೇ ನನ್ನನ್ನೇ ನೋಡಿದ. ನಾನು ದ್ವೇಷ ಬೆರೆತ ಹುಸಿನಗೆಯೊಡನೆ——

"ಏನು, ಶ್ರೀನಿವಾಸ, ಗುರುತು ಸಿಗುವುದಿಲ್ಲವೆ?" ಎಂದೆ.

"ಹಾಂ... ಹ.ಹ.ಹ..... ಎಲ್ಲಿಯೋ ಇಹ್ಹಾಂ,... ನೋಡಿದ ನೆನಪಾಗುತ್ತದೆ." ಎಂದ ತನ್ನ ಸಹಜವಾದ ದೇಶಾವರದ ನಗೆಯಿಂದ.

"ನೀನು ಇಲ್ಲಿಗೆ ಬಂದು ಎಷ್ಟು ದಿನವಾಯಿತು?"

"ಇಾಾಂ... ೧೯೩೧ರಲ್ಲಿ."

ನಾನು ಕಣ್ಣು ಕೆಂಪೇರಿಸಿ ಹೇಳಿದೆ --

"ನಾನು ಸತ್ತು ಇನ್ಶೂರೆನ್ಸಿನ ಹಣ ಸಿಕ್ಕಿದ ಕೂಡಲೆ, ಅಲ್ಲವೆ?"

ಶ್ರೀನಿವಾಸ ಬೆಚ್ಚಿಬಿದ್ದು ಎದ್ದು ಕುಳಿತ.

"ಯಾರು ಸ್ವಾಮಿ ನೀವು? ಯಾರು ಸತ್ತದ್ದು?—ಏನು ಹೇಳುತ್ತಾ ಇದ್ದೀರಿ?..."

"ಮೂರ್ಖಾ! ಗುರುತು ಸಿಕ್ಕುವುದಿಲ್ಲವೇ? ನಾನು ನಿನ್ನ ದಾಯಾದಿ ಆತ್ಮಾರಾಮ ಶಾಸ್ತ್ರಿ! ನನ್ನ ಹಣದಿಂದ ಇಷ್ಟು ಬೊಜ್ಜು ಬೆಳೆದಿದೆ ನಿನಗೆ! ನಾನು ಸತ್ತದಿನವನ್ನು ನೆನೆ——"

ಹೆಚ್ಚಿಗೆ ಮಾತನಾಡದೆ ಒಂದೇ ಹಾರಿನಿಂದ ಅವನ ಕುತ್ತಿಗೆಯನ್ನು ಅವುಕಿ ಹಿಡಿದೆ. ಸ್ವರವೇ ಹೊರಡದಂತೆ ಹಿಡಿದೆ —— ಸೇಡು ತೀರಿಸಿಕೊಂಡೆ.

* * * * *

ಆ ಮೇಲೆ ನನಗೆ ಸೆಕೆ ವಿಪರೀತವಾದ ಹಾಗೆ ತೋರಿತು. ಕೋಟು ತೆಗೆದೆ. ಅರ್ಧಕೈಯ ಅಂಗಿಯು ಒಳಗಿತ್ತು. ಅದರಿಂದ ನನ್ನ ಅರ್ಧ ಕೈ ಕಾಣಿಸಿಕೊಂಡಿತು. ನನ್ನ ಕೈಯ ಹಾಗೆ ಕಾಣಿಸಲಿಲ್ಲ. ವಿಚಿತ್ರವೆನಿಸಿತು.

ಕೋಣೆಯಲ್ಲಿದ್ದ ನನ್ನ ಕನ್ನಡಿ ನೋಡಿಕೊಂಡೆ—

ನಾನು ನಾನಾಗಿರಲಿಲ್ಲ!

ಅದು ನನ್ನ ಮುಖವೂ ಅಲ್ಲ—ಮಾತ್ರವಲ್ಲ, ಅದು ನನ್ನ ವಯಸ್ಸೂ ಅಲ್ಲ. ನಾನು ಮುಂಚೆ ಅಷ್ಟು ಎತ್ತರವೂ ಇದ್ದಿಲ್ಲ. ದೊಡ್ಡ ಸಮಸ್ಯೆಯಾಯಿತು ನನಗೆ.

ಆದರೆ ಪರಿಸ್ಥಿತಿಯು ಆ ವಿಚಾರದಲ್ಲಿ ಹೆಚ್ಚು ತಲೆ ಕೆರಡುಮಾಡಿಕೊಳ್ಳುವಷ್ಟು ಅವಕಾಶವನ್ನು ಕೊಡಲಿಲ್ಲ,

ಶ್ರೀನಿವಾಸನ ಹೆಂಡತಿ ಎಷ್ಟು ಹೊತ್ತಿಗೂ ಹಿಂದೆ ಬರಬಹದು. ಆದ್ದರಿಂದ ಪುನಃ ಕೋಟು ಹಾಕಿಕೊಂಡು ಬಾಗಿಲು ತೆರೆದು ಹೊರಟು ಹೋದೆ. ಸಿಕ್ಕಿ ಬಿದ್ದರೆ ಬಹಳ ತೊಂದರೆಯಿದೆಯೆಂದು ನನಗೆ ಗೊತ್ತಿತ್ತು.

* * * * *

ಬಿಸಿಲಿನಲ್ಲಿಯೇ ಹಿಂದೆ ನಡೆದೆ. ಹಂಪನಕಟ್ಟೆಗೆ ಮುಟ್ಟುವಷ್ಟಕ್ಕೆ ಹೊಟ್ಟೆ ತುಗುಚಿಬಂದಂತಾಯಿತು. ತಲೆ ತಿರುಗಿ ರಸ್ತೆಯ ಮೇಲೆ ಬಿದ್ದುಬಿಟ್ಟೆ.

* * * * *

ಪುನಃ ನನಗೆ ಎಚ್ಚರವಾದಾಗ ನಾನು ಸರಕಾರಿ ಆಸ್ಪತ್ರೆಯಲ್ಲಿದ್ದೆ. ನನಗೆ ಗುರುತಿಲ್ಲದಾಕೆಯೊಬ್ಬಳು ನನ್ನ ಬಳಿ ಕುಳಿತಿದ್ದಳು.

ಆಕೆ ಮಾತನಾಡುವ ರೀತಿಯಿಂದ ನಾನು ಅವಳ ಗಂಡನೆಂದು ನನಗೆ ತಿಳಿಯಿತು. ಆದರೆ ನಾನಾಕೆಯನ್ನು ನೋಡಿದ ನೆನಪಂತೂ ಇಲ್ಲವೇ ಇಲ್ಲ. ನಾನು ಮಾತನಾಡಿದ ರೀತಿಯಿಂದ ನನಗೆ ಹುಚ್ಚು ಹಿಡಿದಿದೆಯೆಂದು ನಿರ್ಧರಿಸಲಾಯಿತು.

ಆದರೆ ಎಲ್ಲಿಯ ಹುಚ್ಚು? ನಾನು ಆತ್ಮಾರಾಮ ಶಾಸ್ತ್ರಿ! ಆರು ವರ್ಷದ ಹಿಂದೆ ನನ್ನ ಸಾವಿನಿಂದ ಸಂತೋಷಗೊಂಡವನನ್ನು ಸಂಹರಿಸಿ ಬಂದಿದ್ದೇನೆ—

ಹಾಂ, ಸಂಹರಿಸಿ ಬಂದಿದ್ದೇನೆ— ಅದರ ನೆನಪು ನನಗೆ ಹೆದರಿಕೆಯನ್ನುಂಟು ಮಾಡಿತು. ಯಾರಿಗಾದರೂ ಗೊತ್ತಾಗಿ ನನ್ನನ್ನು ಪೋಲೀಸಿನವರು ಕಂಡುಹಿಡಿದರೆ? ಯೋಚಿಸುತ್ತಾ ಯೋಚಿಸುತ್ತಾ ನಿದ್ರೆ ಹತ್ತಿತು.

ಎಚ್ಚರವಾದಾಗ ನಿಜವಾಗಿಯೂ ಪೋಲೀಸಿನವರು ನನ್ನ ಮುಂದೆ ನಿಂತಿದ್ದರು. ಶ್ರೀನಿವಾಸನ ಮನೆಯ ಕೆಲಸದವಳು ನನ್ನ ಗುರುತು ಹಿಡಿದಿದ್ದಳು. ನನ್ನನ್ನು ಕೈದು ಮಾಡಲಾಯಿತು.

* * * * *

ನನ್ನ ಹೆಂಡತಿಯೆನ್ನುವಾಕೆ ನನ್ನ ಬಗ್ಗೆ ವಕೀಲರನ್ನು ನಿಯಮಿಸಿದ್ದಳು. ಜಡ್ಜರ ಮುಂದೆ ನನ್ನನ್ನು ನಿಲ್ಲಿಸಲಾಗಿತ್ತು. ಎದುರುಗಡೆಯ ವಕೀಲರು ಪ್ರಶ್ನಿಸಿದರು.

"ನಿನ್ನ ಹೆಸರೇನು?"

"ಆತ್ಮಾರಾಮ ಶಾಸ್ತ್ರಿ!"

ಎಲ್ಲರಿಗೂ ಆಶ್ಚರ್ಯವಾಯಿತು. ನನ್ನ ಕಡೆಯ ವಕೀಲ ಹೇಳಿದ:

"ಈ ಮನುಷ್ಯ ಹೇಳುವುದು ಸರಿಯಲ್ಲ. ಈತನ ಹೆಸರು ಸಂಕಪ್ಪ ಶೆಟ್ಟಿ."

ನನ್ನ ಕಡೆಯ ಸಾಕ್ಷಿಗಳೂ, ನನ್ನ ಹೆಂಡತಿಯೆಂಬಾಕೆಯೂ ನಾನು ಸಂಕಪ್ಪ ಶೆಟ್ಟಿಯೆಂದು ಒಪ್ಪಿದರು. ನಾನು ಮಾತ್ರ ಅಲ್ಲಗಳೆದೆ:—

"ನಾನು ಆತ್ಮಾರಾಮ ಶಾಸ್ತ್ರಿ. ನಾನು ಸತ್ತದ್ದು ತಾ. ೧೩-೮-೧೯೩೨ರಲ್ಲಿ......"

ಎಂದು ಮುಂತಾಗಿ ನನ್ನ ಎಲ್ಲ ವಿಷಯಗಳನ್ನೂ ಹೇಳಿದೆ.

ಆದರೆ ಆತ್ಮಾರಾಮ ಶಾಸ್ತ್ರಿ ಸತ್ತು ಆರು ವರ್ಷಗಳಾಗಿದ್ದವು. ನನ್ನನ್ನು ಯಾರೂ ನಂಬಲಿಲ್ಲ.

ಖೂನಿಮಾಡಿದ್ದನ್ನು ನಾನು ಒಪ್ಪಿದ ಹಾಗಾಯಿತು. ಕೊನೆಗೆ ನನ್ನ ಕಡೆಯ ವಕೀಲರು ಹೊಸ ಯುಕ್ತಿಯೊಂದನ್ನು ಹೂಡಿದರು.

"ಈ ಮನುಷ್ಯನು ಹುಚ್ಚುಹಿಡಿದು ಈ ರೀತಿ ಮಾತಾಡುತ್ತಿದ್ದಾನೆ. ಒಂದು ವೇಳೆ ಈತನೇ ಖೂನಿಯನ್ನು ಮಾಡಿರಬಹುದಾದರೂ ಇವನಿಗೆ ಆಗ ಬುದ್ಧಿಸ್ವಾಸ್ಥ್ಯವಿರಲಿಲ್ಲವಾಗಿ ಇವನು ಕ್ಷಮಾರ್ಹನಾಗಿದ್ದಾನೆ."

ನಾನು ಏನೆಂದರೂ ಯಾರೂ ಕೇಳಲಿಲ್ಲ. ಹುಚ್ಚಿನ ವಿಷಯ ಪರಿಶ್ರಮವುಳ್ಳ ಡಾ| ಪಿಕಾರ್ಡೊರವರನ್ನು ಕರೆಸಲಾಯಿತು. ಅವರು ಎಲ್ಲ ಪರೀಕ್ಷೆಗಳನ್ನು ಮಾಡಿ ಹುಚ್ಚಲ್ಲವೆಂದು ನಿರ್ಧಾರಕೊಟ್ಟರು.

ಆದರೂ ನಾನು ಆತ್ಮಾರಾಮ ಶಾಸ್ತ್ರಿಯೆಂದು ಯಾರೂ ಒಪ್ಪಲಿಲ್ಲ.

* * * * *

ನನ್ನ ಹೆಂಡತಿಯೆಂಬಾಕೆಯ ಹತ್ತಿರ ತುಂಬ ಹಣವಿತ್ತು. ಆಕೆ ನನ್ನ ಹುಚ್ಚನ್ನು ಸ್ಥಾಪಿಸಿಯಾದರೂ ನನ್ನನ್ನು ಬದುಕಿಸುವ ಹಠ ತೊಟ್ಟಿದ್ದಳು. ಅದಕ್ಕಾಗಿ ಕಲ್ಕತ್ತೆಯಿಂದ ಒಬ್ಬ ಯೂರೋಪಿಯನ್ ಡಾಕ್ಟರನ್ನು ಕರೆಸಿದಳು.

ಅವರು ಪರೀಕ್ಷಿಸಿ ತುಂಬಾ ವಿಚಾರಿಸಿ ಕೋರ್ಟಿನ ಮುಂದೆ ಸಾಕ್ಷ್ಯಕೊಟ್ಟರು.

"ಈ ಮನುಷ್ಯ ಹುಚ್ಚನಲ್ಲ. ಇದು ಸತ್ತವನ ಮನಸ್ಸು ಹೊಸಮನುಷ್ಯನಲ್ಲಿ ಸಮಾವೇಶಹೊಂದಿದ ಒಂದು ಸಂದರ್ಭವಾಗಿರಬೇಕು. ಇಂತಹ ಕೇಸುಗಳು ಕೆಲವು ವೇಳೆ ಸಂಭವಿಸಿದ್ದನ್ನು ನಾನು ಕೇಳಿದ್ದೇನೆ. ಇದು ಹೊರತಾಗಿ ನನಗೇನೂ ಈ ವಿಷಯ ಹೊಳೆಯು

ವುದಿಲ್ಲ. ಬುದ್ಧಿಯು ಎಲ್ಲ ವಿಚಾರಗಳನ್ನು ಪರಿಶೀಲಿಸಿದಲ್ಲಿ ಈತನು ಆತ್ಮಾರಾಮ ಶಾಸ್ತ್ರಿಯೇ ಎಂದು ಯಾರೂ ಒಪ್ಪಬೇಕು. ಆದರೆ ಸಾಕ್ಷ್ಯಗಳ ವಿಚಾರಣೆ ನಡೆಸಿದರೆ ಈತನು ಸಂಕಪ್ಪಶೆಟ್ಟಿಯೇ ಸರಿ. ಹೀಗಿರುತ್ತಾ ಸಂಕಪ್ಪ ಶೆಟ್ಟಿಯ ಕಾಯವನ್ನು ಆತ್ಮಾರಾಮ ಶಾಸ್ತ್ರಿಯ ಆತ್ಮವು ಹೊಕ್ಕಿರಬೇಕು. ಇನ್ನೆಂದಾದರೂ ಸಂಕಪ್ಪ ಶೆಟ್ಟಿಯ ಆತ್ಮವೇ ಈತನ ಶರೀರದೊಳಗೆ ಬರುವ ಸಂಭವವೂ ಇದೆ."

ಅನುಮಾನಕರ ಪ್ರಸಂಗವಾದುದರಿಂದ ನನ್ನನ್ನು ಬಿಟ್ಟುಬಿಡಲಾಯಿತು.

ನಾನು ಸಂಕಪ್ಪ ಶೆಟ್ಟಿಯೋ ಆತ್ಮಾರಾಮ ಶಾಸ್ತ್ರಿಯೋ, ಬಗೆಹರಿಯದಾಯಿತು.

* * * * *

ಬಿಡುಗಡೆಯಾದ ಮೇಲೆ ನನ್ನ ಹೆಂಡತಿಯೆಂಬಾಕೆಯು ನನ್ನನ್ನು ಕರೆದುಕೊಂಡು ತನ್ನ ಮನೆಗೆ ಹೋದಳು.

ಎಲ್ಲರೂ ನನಗೆ ಹುಚ್ಚು ಹಿಡಿದಿದೆಯೆಂಬುದನ್ನು ನಂಬುತ್ತಿದ್ದರು. ನನ್ನ ಹೆಂಡತಿಯು ನನ್ನ ಹುಚ್ಚನ್ನು ಬಿಡಿಸುವುದಕ್ಕೆ ಹೇರಳ ಹಣವನ್ನು ವೆಚ್ಚಮಾಡಿದಳು. ಏನೂ ಸಾಗಲಿಲ್ಲ. ಆದರೂ ಇನ್ನೂ ಪ್ರಯತ್ನಗಳು ಮುಗಿದಿಲ್ಲ.

ಈ ಮಧ್ಯೆ ಆಕೆಯ ಕೈಯಿಂದ ಬಿಡಿಸಿಕೊಂಡು ಹೊರಟು ಹೋಗಬೇಕೆಂದು ಎಷ್ಟೆಷ್ಟೋ ಉಪಾಯಗಳನ್ನು ಮಾಡಿದೆ. ನನಗೆ ಹುಚ್ಚು ಹಿಡಿದಿಲ್ಲ, ನಾನು ಆತ್ಮಾರಾಮ ಶಾಸ್ತ್ರಿಯೇ, ಆಕೆ ನನ್ನ ಹೆಂಡತಿಯಲ್ಲ ಎಂದು ಆಕೆಯ ತಲೆಗೆ ಹೊಗಿಸುವುದಕ್ಕಾಗಿ, ಒಡಂಬಡಿಸುವುದಕ್ಕಾಗಿ ಆಕೆಯನ್ನು ಕೇಳಿದೆ-

"ನೋಡು, ನಿನ್ನ ಗಂಡನಿಗೆ ಸಂಸ್ಕೃತ ಬರುತಿತ್ತೆ?"

"ಇಲ್ಲ."

"ಹಾಗಾದರೆ ನೋಡು" ಎಂದು ಸಂಸ್ಕೃತದ ಮಹಾ ಮಹಾ ವಾಕ್ಯಗಳನ್ನು, ವೇದ ಋಕ್ಕುಗಳನ್ನು ಹೇಳಿದೆ.

ಏನೇನು ಮಾಡಿದರೂ ಆಕೆಯನ್ನು ಒಡಂಬಡಿಸಲು ನೂಕಲಿಲ್ಲ.

ದಿನ ನಿತ್ಯವೂ ನನಗೆ ಹುಚ್ಚೆಂದು ಒಡಂಬಡಿಸುವುದಕ್ಕಾಗಿ ಎಲ್ಲರೂ ಪ್ರಯತ್ನ ಮಾಡುತ್ತಿದ್ದಾರೆ. ನನಗೆ ಎಲ್ಲ ವಿಧದ ಔಷಧಗಳನ್ನು ಒತ್ತಾಯದಿಂದ ಕುಡಿಸುತ್ತಾರೆ. ಒಂದೊಂದು ಬಾರಿ ನನಗೆ ನಿಜವಾಗಿಯೂ ಹುಚ್ಚೆ? ಎನ್ನಿಸುತ್ತದೆ.

ನಿತ್ಯವೂ ಕನ್ನಡಿಯಲ್ಲಿ ನನ್ನನ್ನೇ ನೋಡಿಕೊಳ್ಳುತ್ತೇನೆ. ಆಗ ನನಗೆ ಬಹಳ ಭಯವಾಗುತ್ತದೆ. ನಾನು ನಾನಲ್ಲ!

ಈ ಜನರ ವರ್ತನೆಗಳು, ಆಹಾರಗಳು ನನಗೆ ಒಗ್ಗುವುದಿಲ್ಲ. ನನ್ನ ಮನಸ್ಸಿನಲ್ಲಿ ಭೀತಿ, ಅನುಮಾನ ಅಸಹ್ಯಗಳು ತುಮುಲವನ್ನೆಬ್ಬಿಸುತ್ತಿವೆ.

ಈ ರೀತಿ ಬದುಕಿರುದಕ್ಕೆ ನನಗೆ ಇಚ್ಛೆಯಿಲ್ಲ. ಆದಕ್ಕಾಗಿ ನಾನು ಸಾಯುವ ನಿರ್ಧಾರ ಮಾಡಿದ್ದೇನೆ.

ಅದಕ್ಕಾಗಿ ಮನೆಯಿಂದ ಓಡಿ ಬಂದಿದ್ದೇನೆ.

* * * * *

ಇದು ಮೊನ್ನೆ ರೈಲಿನ ಅಡಿಗೆ ಬಿದ್ದು ಆತ್ಮಹತ್ಯೆ ಮಾಡಿಕೊಂಡ ಸಂಕಪ್ಪ ಶೆಟ್ಟಿಯ ಚೀಲದಲ್ಲಿದ್ದ ಪತ್ರ.

# ಹಿಮಾಲಯ



ಶರಷಟ್ಪದಿ

ಭಾರತ ದೇಶಕೆ
ಹಿರಿಮನೆ ತಾನೆಂ-
ದೂರೂರಿಗೆ ತಿಳಿಯುವವೋಲು ||
ಅರಮನೆ ಮಧ್ಯದಿ
ಮೆರೆಯುವ ಭೂಪನ
ತೆರನಿಂ ಶೋಭಿಪುದುತ್ತರದಿ || ೧ ||

ಉತ್ತರ ದೆಸೆಯೊಳ
ಗುತ್ತಮ ಶಿಖರದ
ಮುತ್ತಿನ ಸಾಲಿಂ ರಂಜಿಪುದು
ಕತ್ತಲೆ ಮನೆಯೊಳು
ರತ್ನದ ಮಣೆಯಂ-
ತುತ್ತಮದೊಳ್ಪಿಂ ಬೆಳಗಿಪುದು || ೨ ||

ಮಾರುತ ವಿನಯದಿ
ಮರುತನ ಬಲದಿಂ
ತರುಗಳ ಪುಷ್ಪದ ವಾಸನೆಯಿಂ ||
ಪರಿಮಳ ಬೀರುತ
ಹಾರುತ ನಲಿಯುತ
ವರಗಿರಿಶಿಖರದಿ ಮೆರೆಯುವನು || ೩ ||

ಕರಿಗಳ ಗಡಣದಿ
ಹರಿಗಳ ನಿವಹದಿ
ಪರಿಪರಿ ಮಿಗಗಳ ಗುಂಪುಗಳಿಂ ||
ಮಿರಿ ಮಿರಿ ಮಿಂಚುವ
ವರ ತರ ಪಕ್ಷಿಗ-
ಳುರುತರ ಸ್ವರದಿಂ ರಾಜಿಪನು || ೪ ||

ಸುರ ಮನೆ ಗಂಗೆಯು
ವರಿವುದು ವರತವ
ಚರಣದಿ ಭರದಿಂ ಸಂತಸದಿ ||
ತರ ತರ ತರುಗಳು
ಪರಿಮಳ ಲತೆಗಳು
ಸುರನದಿ ತಟದೊಳು ಫಲಿಸುವವು || ೫ ||

ಭಾರತ ದೇಶಕೆ
ಪರದೇಶಿಗರನು
ಪರಿ ಪರಿ ವಿಧ ಕೊಳ್ಳಿಗೆ ಬಿಡದೆ ||
ಭಾರತ ಮಾತೆಯ
ಹಾರವ ಪರರಿಗೆ
ಮಾರದೆ ಸಲಹಿದೆ ತಾಯಿಯನೂ || ೬ ||

ಜಗದೊಳಗಿರುವಾ
ನಗಗಳಿಗೆಲ್ಲಾ
ಗಗನಭಿದಾನದೊಳುನ್ನತದಿ ||
ಆ ಗನ ಚುಂಬಿತ
ಶಿಖರಾಗ್ರಗಳಿಂ
ರಾಗದಿ ಮೆರೆವನು ರಾಜನ ತೆರದಿ || ೭ ||

ನಿನ್ನಯ ಗೃಹವು
ಮನ್ನಣೆವಾರಿಯ
ಉನ್ನತ ಶಿಲೆಯಿಂ ತುಂಬಿಹುದು ||
ನಿನ್ನನದರಿಂ
ಮನುಜರು 'ಹಿಮಮನೆ'
ಯೆನ್ನುತಲುಸುರುವರ್ ದಿನ ದಿನದಿ || ೮ ||

ಮುನಿಗಳ ಧ್ಯಾನಕೆ
ವಿನಯದಿ ನೆಲೆಯನು
ಮನ ಬಂದಂತೆ ತ್ಯಜಿಸಿದೆಯೆ! ||
ನಿನ್ನಯ ಮಹಿಮೆಯ
ನಿನ್ನಯ ಗುಣಗಳ
ನಿನ್ನಯ ಬಗೆಯನಾನೇನೆಂಬೆ || ೯ ||

—ಕೆ. ಯನ್. ಬಸ್ರಿ.

# ಈ ಬೋರ್ಡುಗಳು!

**ಬೋರ್ಡುಗಳಿಂದಾಗಿ ಜಗತ್ತಿನ ಪರಿಸ್ಥಿತಿಯೇ ಕೆಟ್ಟುಹೋಗಿದೆ. ಉಚ್ಚನೀಚಗಳಾವುವೆಂದು ಪ್ರತ್ಯೇಕಿಸುವುದು ಕಷ್ಟವಾಗಿದೆ ಜಗತ್ತಿನಲ್ಲಿರುವ ಗೊಂದಲ ಸಾಲದುದಕ್ಕೆ ಈ ಬೋರ್ಡುಗಳೆ?**

... ಊರಿನ ಒಂದು ಮಧ್ಯ ಬೀದಿಯಲ್ಲಿ ತಿರುಗಾಡುತ್ತಿದ್ದೆ. ಮೂರು ವರುಷ ಹನ್ನೊಂದು ತಿಂಗಳು ಪ್ರಾಯದ ನನ್ನ ಪಾದರಕ್ಷೆಯ ಒಂದು ಚರ್ಮದ ಹೊಲಿಗೆಯು ಬಿಟ್ಟು ಹೋದುದಲ್ಲದೆ ಮುನ್ನಡೆಯುವುದು ಬಹಳ ಕಷ್ಟವಾಯಿತು. ಪೇಟೆಯ ಮಧ್ಯದಲ್ಲಿ ಎರಡು ಮೆಟ್ಟುಗಳನ್ನು ಎತ್ತಿ ಹಿಡಿದು ಕೊಂಡು ಹೋಗಲು ನನಗೆ ನಾಚಿಕೆಯಾಯಿತು. ಏನು ಮಾಡುವುದೆಂದು ಯೋಚಿಸಿದರೆ ಉಪಾಯವೇ ಹೊಳೆಯಲಿಲ್ಲ. ಅತ್ತಿತ್ತ ನೋಡಿ ಪಾದರಕ್ಷೆಯನ್ನೆಳೆಯುತ್ತಾ ಮೆಟ್ಟಿನಂಗಡಿಯ ಬೋರ್ಡು ಎಲ್ಲಿದೆಯೆಂದು ನೋಡುತ್ತಾ ನಡೆದೆ.

ಂಃಂ

ಕೂಡಲೆ ಕಂಡಿತೊಂದು ಬೋರ್ಡು! 'ದಿ ಲೀಡಿಂಗ್ ಶೂ ಮಾರ್ಟು' ಇದೊಂದು ಅಂಗಡಿಯ ಹೆಸರು. 'ದಿ ಪ್ರೀಮಿಯರ್ ಲೆದರ್ ಹೌಸ್' ಎಂದು ಇನ್ನೊಂದರ ಹೆಸರು. 'ದಿ ಪೀಯರ್‌ಲೆಸ್ ಎಂಪೋರಿಯಮ್' ಮತ್ತೊಂದು ಅಂಗಡಿಯ ಹೆಸರು. ಯಾವ ಅಂಗಡಿಗೆ ಹೋಗುವುದೆಂದು ನನಗರಿಯಲಿಲ್ಲ. ಉತ್ತಮವಾದ ಅಂಗಡಿಗೆ ನನಗೆ ಹೋಗಬೇಕಿತ್ತೆನ್ನಿ. ಒಂದು 'ಲೀಡಿಂಗ್' ಬಹಳ ಪ್ರಸಿದ್ಧವಾದುದು. ಮತ್ತೊಂದು ಬಹು ಉಚ್ಚ ತರಗತಿಯದು. ಮತ್ತೊಂದು ಎಣೆಯಿಲ್ಲದ್ದು.

ಂಃಂ

ಸಾಮಾನುಗಳಿಗೆ ಹೆಚ್ಚು ಗಿರಾಕಿಗಳಿಲ್ಲದಿರಲು ಕಾರಣವೇನೆಂದು ಭಾವಿಸಿದಿರಿ? ಮೊದಲನೆಯದಾಗಿ ಹಣದ ಮುಗ್ಗಟ್ಟು. ಯಾರಾದರೂ ಸಾಮಾನನ್ನು ಕೊಂಡುಕೊಳ್ಳಲು ಹೋದನೆಂದರೆ ಈ ಬೋರ್ಡುಗಳ ಗೊಂದಲ. ಇನ್ನೊಂದು ತೊಂದರೆಯೆಂದರೆ ಜಾಹಿರಾತಿನದು. ಎಲ್ಲಿ ನೋಡಿದರೂ ಜಾಹಿರಾತು! ಮೂರನೆಯ ಕಾರಣವೆಂದರೆ ಕೆನ್ವಾಸ್ ಮಾಡುವುದು.

ಂಃಂ

ಇದೇ ಕಷ್ಟವು ಸ್ವಲ್ಪ ಸಮಯದ ಹಿಂದೆ ನನಗುಂಟಾಗಿತ್ತು. ಮನೆಗೆ ಸ್ವಲ್ಪ ಜವಳಿ ಬೇಕಿತ್ತು. ....ಊರಿನ ಎಡಗಡೆಗೆ ಹೋದಾಗ 'ಬೆಸ್ಟ್ ಶಾಪ್' (ಶ್ರೇಷ್ಠ ಅಂಗಡಿ) ಕಾಣಿಸಿತು. ಬಲಗಡೆಯಲ್ಲಿ 'ಫೇಮಸ್ ಸ್ಟೋರ್ಸ್' (ಪ್ರಖ್ಯಾತ ಭಂಡಾರ) ಎದುರು ನೋಡಿದಾಗ 'ನ್ಯೂ ಎಂಪೋರಿಯಮ್' ಬೇಸರ ಹಿಡಿದು ಒಂದು ಪ್ರದಕ್ಷಿಣೆ ಮಾಡಿ ಹಿಂದೆ ನೋಡುವಾಗಲೂ ಅದೇ ಹಾಳು ಬೋರ್ಡು— 'ಇವರ್ ಶಾಪ್' (ನಿಮ್ಮ ಅಂಗಡಿ) ಇದು ನಮ್ಮ ಅಂಗಡಿಯಾದರೆ ಪ್ರಾಯಶಃ ಉಳಿದವುಗಳೆಲ್ಲಾ ಅವರ ವೈಯಕ್ತಿಕ ಉಪಯೋಗಕ್ಕಾಗಿ ಮಾಡಿದುವುಗಳಾಗಿರಬೇಕು. ನೀವಾದರೇನು ಮಾಡುತ್ತಿದ್ದಿರಿ? ನನಗೆ ಯೋಗ್ಯವಾದ ಜವಳಿ ಬೇಕಿತ್ತು. ಆದರೆ ಪ್ರತಿಯೊಂದು ಅಂಗಡಿಯೂ ಒಳ್ಳೆಯದೆಂದೇ ಹೇಳುವಾಗ ಯಾವುದನ್ನು ನಂಬುವುದು?

ಂಃಂ

ಇನ್ನು ಕ್ಷೌರ ಮಾಡಿಸಲು ಹೋದರೆ ಇದೇ ಪಾಡು! ಎಲ್ಲೆಲ್ಲಿಯೂ ಕ್ಷೌರದಂಗಡಿಗಳ ಬೋರ್ಡುಗಳು. ಒಂದು ಬೊಂಬ್ಯಾ ಸೆಲೂನಾದರೆ ಇನ್ನೊಂದು ಲಂಡನ್ ಸೆಲೂನ್, ಮತ್ತೊಂದು ಸಿಂಗಾಪುರ ಸೆಲೂನ್, ಮಗದೊಂದು ಫ್ರೆಂಚ್ ಸೆಲೂನ್, ಫಿನ್‌ಲೇಂಡ್ ಸೆಲೂನ್, ಮಾತ್ರವಲ್ಲ ಜರ್ಮನ್ ಸೆಲೂನ್! ಪುಣ್ಯದಲ್ಲಿ ಈ ಜರ್ಮನ್ ಸೆಲೂನಿಗೆ ಹೋದವರಿಗೆ ಹಿಟ್ಲರನ ಮೀಸೆಯಂತೆ ಮಾಡುವುದಿಲ್ಲ. ಆದರೆ ಈ ಸೆಲೂನುಗಳಲ್ಲಿ ಹಿಟ್ಲರನ ಚಿತ್ರಗಳಿರುವುದುಂಟು! ಎಲ್ಲಾ ಸೆಲೂನುಗಳಲ್ಲಿ ಕ್ಷೌರವು ಒಂದೇ ರೀತಿಯಲ್ಲಿ ಮಾಡಲ್ಪಟ್ಟರೂ, ಬೋರ್ಡುಗಳು ಮಾತ್ರ ಹಲವಾರು ವಿಧ. ಬೋರ್ಡು ನೋಡಿದೊಡನೆ ಒಳಗಿದ್ದವರು ಏನು ಮಾಡಬಹುದೆಂದು ಹೆದರಬೇಕಾಗುತ್ತದೆ.

ಂಃಂ

ಫೌಂಟನ್‌ಪೆನ್ ಅಂಗಡಿಗಳಲ್ಲಿ ನಾನು ಹಿಟ್ಲರ್ ಮುಸ್ಸೋಲಿನಿಯರ ಚಿತ್ರವನ್ನು ಕಾಣಲಿಲ್ಲ. ಒಂದಂಗಡಿಯಲ್ಲಿ ಒಬ್ಬನು ದೊಡ್ಡ ಫೌಂಟನ್‌ಪೆನ್ನಿನೊಂದಿಗೆ ನಡೆಯುತ್ತಾನೆ. ಹೌದೌದು! ಜಗತ್ತಿನ ಪ್ರಗತಿಯೊಡನೆ ಅದೂ ಮುನ್ನಡೆ

ಯುತ್ತದೆ. ಇನ್ನೊಂದು ಅಂಗಡಿಯಲ್ಲಿ ಜಡ್ಜರೊಬ್ಬರು ಫೌಂಟನ್ ಪೆನ್ನಿನಿಂದ ಜಜ್‌ಮೆಂಟ್ ಬರೆಯುತ್ತಾರೆ. ಮತ್ತೊಂದಂಗಡಿಯಲ್ಲಿ ಆರೆಬತ್ತಲೆ ತರುಣಿಯೊಬ್ಬಳು ತನ್ನ ರವಕೆಗೊಂದು (ಎದೆಯಲ್ಲಿ) ಫೌಂಟನ್ ಪೆನ್ನನ್ನು ಧರಿಸಿಕೊಂಡಿರುತ್ತಾಳೆ. ಹೆಚ್ಚಾಗಿ ಸ್ತ್ರೀಯರು ಯುರೋಪಿಯನರು. ಪ್ರಾಯಶಃ ಭಾರತೀಯ ಸ್ತ್ರೀಯರು ಫೌಂಟನ್ ಪೆನ್ ಉಪಯೋಗಿಸುವುದಿಲ್ಲವೆಂದು ಕಾಣುತ್ತದೆ. ಇನ್ನು ಕೆಲವಂಗಡಿಗಳಲ್ಲಿ ಕರಿಹಲಗೆಗಳ ಮೇಲೆ ಬಿಳಿ ಅಕ್ಷರಗಳು. 'ವಿದ್ಯಾರ್ಥಿಗಳು ನಮ್ಮಲ್ಲಿಂದಲೇ ಫೌಂಟನ್‌ಪೆನ್ನನ್ನು ಕೊಂಡು ಕೊಳ್ಳುತ್ತಾರೆ. ಆದರೆ ನಿರುದ್ಯೋಗಿಗಳು ಫೌಂಟನ್ ಪೆನ್ನನ್ನು ಉಪಯೋಗಿಸಿರುವ ಚಿತ್ರವನ್ನು ನಾನೆಲ್ಲಿಯೂ ಕಾಣಲಿಲ್ಲ.

ಂಃಃಂ




ಇತ್ತೀಚೆಗೆ ನಮ್ಮಜ್ಜಿ ಒಂದಾಣೆಯ ನಸ್ಯವನ್ನು ತರ ಹೇಳಿದರು. . . . ಊರಿನ ಒಂದು ಬೀದಿಗೆ ಹೋದೊಡನೆ 'ಜಗದ್ವಿಖ್ಯಾತ ಕೃಷ್ಣಾ ಸ್ನಫ್' ಪ್ರಾಯಶಃ ಗ್ರೀನ್ ಲೇಂಡಿನಲ್ಲಿ ಇದು ಖರ್ಚಾಗುತ್ತಿರಬಹುದು. ಇನ್ನೊಂದೆಡೆಯಲ್ಲಿ 'ರಾಮಾ ಸ್ನಫ್' ಮತ್ತೊಂದೆಡೆಯಲ್ಲಿ 'ಸುವಾಸಿನೀ ನಸ್ಯ', 'ಯಚ್. ಬಿ. ನಸ್ಯ', 'ಮದ್ರಾಸ್ ನಸ್ಯ' ಹೇಳಿ ತೀರದು. ಸಾವಿರಾರು ವಿಧದ ನಸ್ಯಗಳು.

ಂಃಃಂ

ಈ ಸಂದರ್ಭದಲ್ಲಿ ಒಂದು ಮಾತನ್ನು ಹೇಳಬೇಕಾಗಿದೆ. ಕಾಫಿ ಹೊಟೆಲುಗಳ ಕುರಿತು ಹೇಳಿ ಬೇಕಾಗಿಲ್ಲ. ಎಲ್ಲಾ ತರದ ಭವನಗಳಿಗೆ ಪೌರಾಣಿಕ ಹೆಸರುಗಳು ಸೇರಿಸಲ್ಪಡುತ್ತವೆ. 'ಕೃಷ್ಣಾ ಭವನ' 'ರಾಮ ಭವನ್' 'ಸುಗುಣ ಭವನ' 'ಸರ್ದಾರ್ ಭವನ'', ಮೊದಲಾದ ಭವನಗಳು. ಇಲ್ಲಿಗೆ ಮುಗಿಯಲಿಲ್ಲ. ವಿಲಾಸಗಳೂ ಇವೆ. 'ವೃಕೋದರ ವಿಲಾಸ' 'ಭೀಮ ವಿಲಾಸ' 'ಪಾರ್ಥ ವಿಲಾಸ' 'ಧರ್ಮ ವಿಲಾಸ' 'ಕೋಮಲ ವಿಲಾಸ' 'ಅತಿ ಕೋಮಲ ವಿಲಾಸ' ಪುಣ್ಯದಲ್ಲಿ 'ದ್ರೌಪದಿ ವಿಲಾಸ'ವನ್ನು ನಾನಿನ್ನೂ ಕಂಡಿಲ್ಲ. ಪ್ರತಿಯೊಂದು ಹೊಟೆಲಿನ ಎದುರಿನಲ್ಲಿ ಭವನ, ವಿಲಾಸ, ಮಹಲ್, ಕೇಫೆ, ಇತ್ಯಾದಿಗಳು. ಪ್ರಾಯಶಃ ಭಾರತದ ಎಲ್ಲೆಡೆಗಳಲ್ಲಿಯೂ ಇದೇ ರೋಗವು ಹಬ್ಬಿರಬಹುದು.

ಂಃಃಂ

ಇನ್ನೊಂದು ವಿಚಾರ. ಕಾಂಗ್ರೆಸ್ ಮಂತ್ರಿಮಂಡಲವಾದಂದಿನಿಂದ ಈ ಹೊಟೆಲುಗಳ ಹೆಸರುಗಳೂ ವ್ಯತ್ಯಾಸವಾಗಲಾರಂಭಿಸಿವೆ. ಈಗ ಜವಾಹರ ಸ್ಟೋರ್ಸ್, ಜವಾಹರ ಹೊಟೆಲ್, ಗಾಂಧಿ ಎಂಪೋರಿಯಮ್, ಗಾಂಧಿ ಹೊಟೆಲ್, ಸುಭಾಷ್ ಭವನ, ಇತ್ಯಾದಿಗಳು ತಲೆದೋರಿವೆ. ರಾಷ್ಟ್ರದ ಆಗುಹೋಗುಗಳಲ್ಲಿ ಬರಬಹುದಾದ ಬದಲಾವಣೆಗಳನ್ನು ನಾವು ಬೋರ್ಡುಗಳಲ್ಲಿಯೂ ಕಾಣಲು ಸಾಧ್ಯವಿದೆ.

# ನಿಮಗೆ ಬೇಸರವಾದಾಗ ◎ ◎ ◎ ◎
# ◎ ◎ ◎ ◎ ◎ ◎ ನನಗೆ ಬರೆಯಿರಿ

**ಶ್ರೀ. ಶಂಕರನಾರಾಯಣ ರಾವ್, ಕಾರ್ಕಳ.**

"ಕಳೆದ ಬಾರಿ ನೀವು ಶ್ರೀ. ಚಂದ್ರರಾಜರ ಪ್ರಶ್ನೆಗೆ ಉತ್ತರವಾಗಿ 'ಪ್ರಜಾಮತ' ಮತ್ತು 'ಅಂತರಂಗ'ದ ಜೋಯಿಸರ ಫಲನಿರೂಪಣೆಯಲ್ಲಿ ವ್ಯತ್ಯಾಸ ಬರಲು ಅವರ ನಕ್ಷತ್ರಭೇದವೇ ಕಾರಣವಾಗಬಹುದೆಂದು ಬರೆದಿದ್ದೀರಿ. ಆದರೆ ವೃಷಭ ರಾಶಿಯ ಫಲವನ್ನು ಇಬ್ಬರು ಜೋಯಿಸರೂ ಒಂದೇ ರೀತಿಯಲ್ಲಿ ಬರೆದಿದ್ದಾರೆ. ನಕ್ಷತ್ರಭೇದವು ವೃಷಭ ರಾಶಿಯನ್ನು ಮುಟ್ಟಲಾರದೆ? ಕನ್ಯಾ ರಾಶಿಯಲ್ಲಿ ಮಾತ್ರ ಹೀಗೆ ವ್ಯತ್ಯಾಸವಾಗಲು ಕಾರಣ ಗೊತ್ತಾಗುವುದಿಲ್ಲ"

ಕನ್ಯಾ ರಾಶಿಯ ಮಹತ್ವವು ನಿಮಗೆ ಗೊತ್ತಿಲ್ಲ. ಒಬ್ಬೊಬ್ಬಳು "ಕನ್ಯೆ"ಯನ್ನು ನೋಡಿದರೇನೇ ನಮಗೆ ಹೇಗೋ ಹೇಗೋ ಆಗುವಾಗ "ಕನ್ಯಾ—ರಾಶಿ"ಯನ್ನೇ ನೋಡಿದ ಜೋಯಿಸರು ಬೆರಗಾದುದು ಸಹಜವೆನಿಸುವುದಿಲ್ಲವೆ?

ಂ ಂ ಂ

**ಶ್ರೀ. ಕೆ. ರತ್ನಾಕರ ಶೆಟ್ಟಿ ಮಂಗಳೂರು.**

"ಮಧ್ಯ ಪ್ರಾಂತ್ಯದ ಕೆಲವು ಹರಿಜನರು ಮಹಾತ್ಮಾಜಿಯರ ಶಿವಗಾಂವಿನ ಆಶ್ರಮದಲ್ಲಿ ಹರಿಜನರಿಗೆ ಮಂತ್ರಿಪದವಿಯನ್ನೀಯಬೇಕೆಂದು ಹೂಡಿರುವ ಸತ್ಯಾಗ್ರಹವು ದುರಾಗ್ರಹವಲ್ಲವೆ?"

ಅದು ಸತ್ಯಾಗ್ರಹವೂ : ಅಲ್ಲ, ದುರಾಗ್ರಹವು ಅಲ್ಲ. ಕೇವಲ ಆಗ್ರಹ?

ಂ ಂ ಂ

**ಶ್ರೀ. ಬಿ. ಕೃಷ್ಣರಾವ್ ಮಂಗಳೂರು.**

"ಇತ್ತೀಚೆಗೆ ಪ್ರಕಟವಾದ ಒಂದು ವಕ್ತವ್ಯದಲ್ಲಿ ಶ್ರೀ. ರಂಗರಾವ್ ತಲಚೇರಿಕರರು—ಕಾಂಗ್ರೆಸಿನಲ್ಲಿ ತನಗೆ ಯೋಗ್ಯ ನ್ಯಾಯವು ಸಿಗದಿದ್ದರೆ ತಾನು ಅದನ್ನು ಬಿಟ್ಟು ತನ್ನ ಆತ್ಮ ಸನ್ಮಾನವನ್ನು ಉಳಿಸಿಕೊಳ್ಳಬೇಕಾಗುವುದೆಂದು ಹೇಳಿದ್ದಾರೆ. ಹೀಗೆ ಬೆದರಿಕೆ ಹಾಕುವುದಕ್ಕೆ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಬಗ್ಗಬಹುದೆಂದು ಅವರೆಣಿಕೆಯೆ?"

ಅವರೆಣಿಕೆಯೇನೋ ನಾನರಿಯೆ. ನನಗಂತೂ ಕಾಂಗ್ರೆಸ್ ಖಂಡಿತವಾಗಿಯೂ ಬಗ್ಗಲಾರದೆಂದು ಧೈರ್ಯವಿದೆ. ಹತ್ತಾರು ಚರಂಡಿಗಳ ನೀರು ತನ್ನೊಳಗೆ ಹರಿಯುತ್ತಿರಲು ಕೆರೆಯ ಹಳೇ ಬುಗ್ಗೆಯೊಂದರ ನೀರು ತನಗೆ ಇನ್ನು ಮುಂದೆ ದೊರಕಲಾರದೆಂಬುದಕ್ಕೆ ಭಯಪಡುತ್ತದೆಯೆ?

ಂ ಂ ಂ

## ನನಗರಿಯದು, ನಿಮಗೆ-



**ನಾಗಸ್ವರವು ನಾಗರ ಹಾವಿನ ಕೂಗೆ?**

**ಶ್ರೀ. ಶ್ರೀನಿವಾಸಮೂರ್ತಿ, ಬೆಂಗಳೂರು.**

"ಕರ್ನಾಟಕದಲ್ಲಿ ಚಲಚ್ಚಿತ್ರ ವ್ಯವಸಾಯವು ಕೀಳ್ದೆಸೆಗಿಳಿಯಲು ಕಾರಣವೇನು?"

ಅದು ಮೇಲ್ದೆಸೆಯಲ್ಲಿದ್ದುದು ಯಾವಾಗ ಎಂಬುದನ್ನು ತಿಳಿಸಿದರೆ ಕಾರಣವನ್ನು ಕೊಡಬಹುದು.

ಂ ಂ ಂ

**ಶ್ರೀ. ಎಸ್. ಎಸ್. ಹೊಳ್ಳ, ಕುಂದಾಪುರ.**

"ಅಖಿಲ ಭಾರತ ಮಹಿಳಾ ಪರಿಷತ್ತಿನವರು ಅಶ್ಲೀಲ ಸಾಹಿತ್ಯವನ್ನು ಪ್ರಕಟಿಸಬಾರದೆಂದು ಠರಾವು ಮಾಡಿದ್ದಾರೆ. ಸಿಂಧದಲ್ಲಿ ಸ್ತ್ರೀಯರು ಗಂಡರಿದಿರ ಮೇಲೆ ತಣ್ಣೀರೆರಚಿ "ಓಂ ಮಂಡಲಿ"ಯ ಸದಸ್ಯರಾಗುತ್ತಿದ್ದಾರೆ. ಒಟ್ಟಿನ ಮೇಲೆ ಸ್ತ್ರೀಯರು ದಿನೇದಿನೇ ಶಕ್ತಿವಂತರಾಗುತ್ತಾ ಮುಂದರಿಯುತ್ತಿದ್ದಾರೆ. ಕಾಲಕ್ರಮದಲ್ಲಿ ಅವರು ಪುರುಷರ ಸ್ವಾತಂತ್ರ್ಯದಲ್ಲಿಯೂ ಕೈ ಹಾಕಬಹುದು. ಹೀಗಿರುವಾಗ ಈಗಲೇ ಮುಂಜಾಗ್ರತೆ ತೆಗೆದುಕೊಂಡು ಅಖಿಲ ಭಾರತ ಪುರುಷ ಪರಿಷತ್ತೊಂದನ್ನು ಸ್ಥಾಪಿಸುವುದು ಪುರುಷರ ಕರ್ತವ್ಯವಲ್ಲವೆ?"

ನಿಜ. ನಿಜ. ಆದರೆ ಈ ವಿಷಯದಲ್ಲಿ ನೀವು ಅಷ್ಟೊಂದು ತ್ರಸ್ತರಾಗುವ ಪರಿಸ್ಥಿತಿಯು ಇನ್ನೂ ಒದಗಿಲ್ಲವೆಂದು ನನ್ನ ಭಾವನೆ, ಅಶ್ಲೀಲ ಸಾಹಿತ್ಯವನ್ನು ಪ್ರಕಟಿಸಬಾರದೆಂದಷ್ಟೆ ಠರಾವು ಮಾಡಿದ್ದಾರೆ ಮಹಿಳೆಯರು. ಇನ್ನು ಒಂದು ಹೆಜ್ಜೆ ಮುಂದರಿದು ಯಾವುದನ್ನಾದರೂ "ಕಾರ್ಯರೂಪ"ದಲ್ಲಿ ಮಾಡಬಾರದೆಂದು ಠರಾವು ಮಾಡಿದಾಗ ಈ ಕುರಿತು ಜಾಗ್ರತೆಮಾಡಿದರೆ ಸಾಕು.

# ಅಂತರಂಗದ ಸುದ್ದಿಗಳು

ಅಂತರಂಗದ ವಿಶೇಷ ಪ್ರತಿನಿಧಿಯ ಗುಟ್ಟಿನ ಡೈರಿಯ ಪೂರ್ಣ ನಿರಾಧಾರವಾದ ಸುದ್ದಿಗಳು. ಓದಿ ಗಡಿಬಿಡಿ ಮಾಡಿದರೆ ಯಾರೂ ಜವಾಬ್ದಾರರಲ್ಲ.

**ಡಾ| ಖರೆಯವರ ಮೇಲೆ ಶಿಸ್ತಿನ ಜಾರಿ.**

ಮಧ್ಯಪ್ರಾಂತ್ಯದ ಮಾಜಿ ಪ್ರಧಾನರಾದ ಡಾ| ಯನ್. ಬಿ. ಖರೆಯವರ ಮೇಲೆ ಢಿಲ್ಲಿಯಲ್ಲಿ ತಾ. ೨೨ ರಂದು ಸೇರಲಿರುವ ವರ್ಕಿಂಗ ಕಮಿಟಿಯಲ್ಲಿ ಶಿಸ್ತನ್ನು ಜಾರಿಮಾಡಬೇಕೆಂಬ ನಿರ್ಣಯವಾಗುವುದೆಂದು ತಿಳಿದು ಬಂದಿದೆಯಂತೆ.

೦ ೦ ೦

**ಬದಲಾವಣೆ.**

ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಸದಸ್ಯರು ಚುನಾಯಿಸಲ್ಪಡಬೇಕಲ್ಲದೆ, ಅಧ್ಯಕ್ಷರಿಂದಲೇ ಆರಿಸಲ್ಪಡಬಾರದೆಂಬ ಶ್ರೀ. ಕೆ. ಎಫ್. ನರಿಮನರ ಸೂಚನೆಯನ್ನು ಅಖಿಲ ಭಾರತ ಕಾಂಗ್ರೆಸ್ ಕಮಿಟಿಯವರು ಸ್ವೀಕರಿಸುವರಂತೆ.

೦ ೦ ೦

**ಶೌಕತಾಲಿಯವರ ಪಕ್ಷಾಂತರ**

ಮುಸ್ಲಿಮ್ ಲೀಗಿನ ಇತ್ತೀಚಿಗಿನ ಚಟುವಟಿಕೆಗಳು ತನ್ನ ಅಭಿಪ್ರಾಯಕ್ಕೆ ವಿರೋಧವೆಂದು ಕಂಡು ಬಂದಿರುವುದರಿಂದ ಮೌಲಾನಾ ಶೌಕತಾಲಿಯವರು ಕಾಂಗ್ರೆಸಿಗೆ ಸೇರುವರಂತೆ.

೦ ೦ ೦

**ಸ್ಪೈನಿಗೆ ಶ್ರೀ. ಕಮಲಾದೇವಿ.**

ಶ್ರೀಮತಿ ಕಮಲಾದೇವಿಯರು ಸದ್ಯದಲ್ಲಿಯೇ ಸ್ಪೈನಿಗೆ ಹೋಗುವರೆಂದೂ, ಸರಕಾರೀ ಪಕ್ಷದ ಸದಸ್ಯರೊಡನೆ ಮಾತುಕತೆಗಳನ್ನು ನಡೆಸುವರೆಂದೂ ತಿಳಿದುಬಂದಿದೆಯೆಂದು ಸುದ್ದಿ ಹರಡಲಾರಂಭಿಸಿದೆಯೆಂದು ಕರ್ಣಾಕರ್ಣಿಕೆ.

೦ ೦ ೦

**ಭಾರತದಲ್ಲಿ ತುರ್ಕಿ ಪ್ರಚಾರ.**

ಟರ್ಕಿಯ ಸರ್ವಾಧಿಕಾರಿ ಕಮಾಲ್ ಪಾಶರವರು ಟರ್ಕಿಯ ಮಾದರಿಯನ್ನು ಭಾರತದ ಮುಸಲ್ಮಾನರು ಅನುಸರಿಸಬೇಕೆಂದು ಪ್ರಚಾರ ಕಾರ್ಯನಡೆಸಲು ಹಾಜಿ ಮಹಮ್ಮದ್ ಝುಕಾತಿಯಾ ಬೆ ಎಫೆಂಢಿ ಯೆಂಬವರನ್ನು ಕಳುಹಿಸಿದ್ದಾರೆ. ಇವರು ಈಗ ಗಡಿನಾಡಿನಲ್ಲಿ ಭಾಷಣವೀಯುತ್ತಿದ್ದಾರೆ. ಸದ್ಯದಲ್ಲಿಯೇ ಕರ್ನಾಟಕಕ್ಕೆ ಬರುವರೆಂದು ತಿಳಿಯಲಾಗಿದೆ.

೦ ೦ ೦

**ಸ್ವದೇಶೀ ಮೋಟಾರ್**

೧೯೪೦ರಲ್ಲಿ ಮುಂಬಯಿಯಲ್ಲಿ ಸ್ವದೇಶೀ ಮೋಟಾರುಗಳು ತಯಾರಿಸಲ್ಪಡುವುವೆಂದು ವಿಶ್ವಸನೀಯವಾಗಿ ತಿಳಿದು ಬಂದಿದೆಯಂತೆ.

೦ ೦ ೦

**ಅಝ್ಹಾದರಿಗೆ ಅಧ್ಯಕ್ಷತೆ.**

ಮುಂದಿನ ವರುಷ ಮೌಲಾನಾ ಅಬುಲ್ ಕಲಮ್ ಅಝ್ಹಾದರನ್ನು ಕಾಂಗ್ರೆಸ್ ಅಧ್ಯಕ್ಷರನ್ನಾಗಿ ಮಾಡಬೇಕೆಂದು ಹಲವು ಪ್ರಾಂತ್ಯಗಳಿಂದ ಈಗಾಗಲೇ ಸೂಚನೆಯು ಹೋಗಲಾರಂಭವಾಗಿದೆಯಂತೆ.

೦ ೦ ೦

**ಚಹಾ ನಿಷೇಧ ಚಳವಳ.**

ಮಂಗಳೂರಿನಲ್ಲಿ ಚಹಾ ಕುಡಿಯಬಾರದೆಂಬ ಚಳವಳವು ಪ್ರಾರಂಭವಾಗಲಿದೆಯಂತೆ. ಸಾರ್ವಜನಿಕರು ಈಗಾಗಲೇ ಚಹಾ ನಿಷೇಧ ಕಮಿಟಿಗಳನ್ನು ಸ್ಥಾಪಿಸಲು ಯತ್ನಿಸುತ್ತಿದ್ದಾರೆಂದು ವದಂತಿ.

೦ ೦ ೦

**ಓಂ ಮಂಡಲಿಯ ಶಾಖೆ.**

ಕಾಸರಗೋಡಿನಲ್ಲಿ ಸಿಂಧ ಪ್ರಾಂತ್ಯದ ಹೈದರಾಬಾದಿನ "ಓಂ ಮಂಡಲಿ"ಯ ಶಾಖೆಯನ್ನು ತೆರೆಯುವ ಸಿದ್ಧತೆಗಳು ಭರದಿಂದ ನಡೆಯುತ್ತಿವೆಯೆಂದು ತಿಳಿದು ಬಂದಿದೆಯಂತೆ.

೦ ೦ ೦

**ಆರು ಲಕ್ಷ ಕಾಂಗ್ರೆಸ್ ಸದಸ್ಯರು**

ಕರ್ನಾಟಕದಲ್ಲಿ ಇಷ್ಟರತನಕ ೬ ಲಕ್ಷಕ್ಕಿಂತಲೂ ಮಿಕ್ಕಿ ಪ್ರಾಥಮಿಕ ಕಾಂಗ್ರೆಸ್ ಸಭಾಸದರು ಸೇರಿಸಲ್ಪಟ್ಟಿರುವರೆಂದು ಒಂದು ವಾರ್ತೆಯು ಹೇಳುತ್ತಿದೆ.



# ಷೋಕೀ ಜಗತ್ತಿನ ಝೋಕೀ ಪುರಾಣ

**ಶಿವಗಾಂವಿಗೆ ಸೈನ್ಯ?**

ನಮ್ಮ ತಿರುವಾಂಕೂರಿನ ಅಭಿನವ ವಿಲ್ಲಿಂಗ್ಡನ್ ಥೊರೆ ಸರ್. ಸಿ. ಪಿ. ರಾಮಸ್ವಾಮಿ ಐಯ್ಯರರು ತಿರುವಾಂಕೂರಿನ ಪ್ರಜೆಗಳ ಅಹಿಂಸಾತ್ಮಕ ವಿಧಾನಗಳನ್ನು ಸಹಿಸಲಾರದೆ ಸರಕಾರದ ಶಕ್ತಿಯನ್ನೆಲ್ಲಾ ತೋರಿಸುತ್ತಿದ್ದಾರೆ. ಮಹಾತ್ಮಾ ಗಾಂಧಿಯವರು ದಿವಾನ್ ಸಾಹೇಬರ ವಿಧಾನವನ್ನು ಖಂಡಿಸಿರುವುದಕ್ಕೆ ಅವರಮೇಲೂ ಉರಿದು ಬಿದ್ದಿದ್ದಾರೆ.

ಶಿವಗಾಂವ್ ಮಧ್ಯಪ್ರಾಂತ್ಯದಲ್ಲಿದ್ದುದರಿಂದ ಗಾಂಧಿಜಿಯವರು ಬದುಕಿದರು. ಇಲ್ಲದಿದ್ದರೆ ಸರ್. ಸಿ. ಪಿ. ಯವರ ಸೈನ್ಯವು ಅವರ ಮೇಲೆ ಗುಂಡೆಸೆಯದಿರುತ್ತಿದ್ದಿಲ್ಲ.

. . . . .

**ಹೊಸ ಕಾಯಿದೆ.**

ಕ್ರಿಮಿನಲ್ ಕಾಯಿದೆಯಂತಹ ಒಂದು ಕಾಯಿಡೆಯನ್ನು ತಯಾರಿಸುವ ಕುರಿತು ಮದ್ರಾಸ್ ಸರಕಾರವು ಯೋಚಿಸುತ್ತಿದೆಯಂತೆ.

ಇದಕ್ಕೆ "ಸ್ವದೇಶೀ ಕ್ರಿಮಿನಲ್ ಕಾಯಿದೆ"ಯೆಂಬ ಹೆಸರಿಟ್ಟರಾಗದೆ?

. . . . .

**ಹಕ್ಕರ ಬಾಂಬ್**

ಬಂಗಾಳದ ಪತ್ರಿಕೆಗಳು ಸಿಕ್ಕಾಬಟ್ಟೆ ಸರಕಾರವನ್ನು ಖಂಡಿಸುವುದರಿಂದ ಮಿ| ಫಜ್ಲುಲ್ ಹಕ್ಕರ ಸರಕಾರವು ಅಂತಹ ಪತ್ರಿಕೆಗಳನ್ನು ಶಿಕ್ಷಿಸಲು ಒಂದು ಹೊಸ ಕಾಯಿದೆಯನ್ನು ಮಾಡುವರಂತೆ.

ಬಹಳ ವಿಳಂಬವಾಯಿತು. ಈ ಕಾಯಿದೆಯೊಂದಿಲ್ಲದಿರುವುದರಿಂದ ಬಂಗಾಳದ ಪ್ರಜೆಗಳಿಗೆ ಬಹಳ ಕಷ್ಟವಾಗಿದೆ.

ಮಿ| ಹಕ್ಕರ ಮಾದರಿ ಕಾಯಿದೆಯನ್ನು ಆಫ್ರಿಕದಲ್ಲಿ ಜಾರಿಗೆ ತರುವ ಕುರಿತು ಯೋಚಿಸುತ್ತಿದ್ದಾರಂತೆ.

. . . . .

**ಜಪಾನಿಯರಿಗೆ ಮುಸ್ಲಿಮ್ ಲೀಗಿನ ಬೆಂಬಲ!**

ಕಾಂಗ್ರೆಸ್ ಏನು ಮಾಡಿದರೂ ಅದಕ್ಕೆ ಮುಸ್ಲಿಮ್ ಲೀಗಿನ ವಿರೋಧ. ಈ ತತ್ವವನ್ನು ಪೂರ್ಣವಾಗಿ ಪರಿಪಾಲಿಸುವುದಕ್ಕಾಗಿ ಕಾಂಗ್ರೆಸಿನ ಚೀನದ ವೈದ್ಯಕೀಯ ಮಂಡಲಕ್ಕೆ ವಿರುದ್ಧವಾಗಿ ಮುಸ್ಲಿಮ್‌ಲೀಗ್ ಜಪಾನ್ ವೈದ್ಯಕೀಯ ಮಂಡಲವೊಂದು ಸದ್ಯದಲ್ಲಿಯೇ ಭಾರತದಿಂದ ಹೊರಡುವುದಂತೆ.

. . . . .

**ಖರೆ ಸಮಸ್ಯೆ.**

ಡಾ| ಖರೆಯವರು ತಮ್ಮ ಕುರಿತು ಹಾಗೂ ಸರ್ದಾರ್ ಪಟೇಲರೇ ಮೊದಲಾದ ಪ್ರಭೃತಿಗಳ ಕುರಿತು ಯೋಗ್ಯವಾದೊಂದು ವಿಚಾರಣೆಯು ನಡೆಯಬೇಕೆಂದು ಹೇಳಿದ್ದಾರೆ.

ವಿಚಾರಣೆಯು ನಡೆಯುವುದು ಅತ್ಯಂತ ಸಂಶಯಾಸ್ಪದ ವಿಚಾರವಾದರೂ ಡಾ| ಖರೆಯವರನ್ನು ಕಾಂಗ್ರೆಸಿನಿಂದ ಹೊರಗೆ ಹಾಕುವುದು ಮಾತ್ರ ಸುಸ್ಪಷ್ಟ.

. . . . .

**ಚಹಾನಿಷೇಧ ಕಾಯಿದೆ.**

ಹುಬ್ಬಳ್ಳಿಯ ಸಮೀಪದಲ್ಲಿರುವ ಜಮಖಂಡಿಯ ನಾಲ್ಕೈದು ಗ್ರಾಮಗಳ ನಿವಾಸಿಕರು ಚಹಾಪಾನವನ್ನು ನಿಷೇಧಿಸಬೇಕೆಂಬ ಠರಾವನ್ನು ಮಾಡಿ ಈಗಾಗಲೇ ಪಾನನಿಷೇಧ ಸಮಿತಿಗಳನ್ನು ಸ್ಥಾಪಿಸಿರುವರಂತೆ.

ಈ ಚಳವಳವು ಎಲ್ಲೆಡೆಗಳಲ್ಲಿಯೂ ಹಬ್ಬಿಬಿಟ್ಟರೆ ಏನಾಗಬಹುದೆಂದು ಪ್ರತ್ಯೇಕ ಹೇಳಬೇಕೆ?

. . . . .

**ಕೋರ್ಟಿನಲ್ಲಿ ಲೇಖರಾಜರು.**

ಓಂ ಮಂಡಲಿಯನ್ನು ಸೇರಿದ ಸ್ತ್ರೀಯರ ಗಂಡಂದಿರಿಗೆ ಸುಖವಿಲ್ಲದಿರುವುದರಲ್ಲಿ ಆಶ್ಚರ್ಯವಿಲ್ಲ. ಆದರೆ ಆದರ ಸ್ಥಾಪನಾಚಾರ್ಯರಾದ ಭಾಯಿಾ ಲೇಖರಾಜರಿಗೂ ಸುಖವಿಲ್ಲ. ಪಾಪ, ಕ್ರಿಮಿನಲ್ ಕೋರ್ಟಿನ ಸೆಕ್ಷನ್ ೧೦೭ ಶ್ರೀ

ಕೃಷ್ಣನ ಅವತಾರ ಪುರುಷರ ಮೇಲೂ ಹೊರಿಸಲ್ಪಟ್ಟಿತು.

ಸೆಪ್ಟೆಂಬರ್ ೨೨ರಂದು ಪುನಃ ವಿಚಾರಣೆಯಾಗಲಿದೆ. ಆಗ ಓಂ ಮಂಡಲಿಯ ಕೆಲವು "ತತ್ವ"ಗಳು ಬಯಲಾಗಬಹುದು.

. . . . .

### ಧುರೀಣರಿಗೆ ಬೆದರಿಕೆ

ಡಾ| ಖರೆ, ಮಹಾತ್ಮಾ ಗಾಂಧಿ, ಬ್ರಿಜ್‌ಲಾಲ್ ಬಿಯಾನಿ ಮೊದಲಾದವರಿಗೆ "ಯಸ್. ಯಸ್. ಸೀಕ್ರೆಟ್ ಸೊಸ್ಯಾಟಿ" ಯೆಂಬ ಗುಪ್ತ ಸಂಘದಿಂದ ಬೆದರಿಕೆಯ ಪತ್ರಗಳು ಹೋಗಿವೆಯಂತೆ. ಸಾರ್ವಜನಿಕ ಶಾಂತಿಯನ್ನು ಕೆಡಿಸುವುದರಿಂದ ಧುರೀಣರಿಗೆ ಸರಿಯಾದ ಪಾಠವು ಕಲಿಸಲ್ಪಡುವುದೆಂದು ಢಿಲ್ಲಿಯಿಂದ ಕಳುಹಿಸಲ್ಪಟ್ಟಿದ್ದ ಆ ಪತ್ರವು ಹೇಳುತ್ತಿದೆ.

ಈ ಹೊಸ ಸೊಸ್ಯಾಟಿಯ ಬೇಳೆಯು ಬೇಯಬಹುದೇ ಎಂಬೊಂದು ಸಂಶಯ.

. . . . .

### ಕೋಣನ ಹೊಟ್ಟೆಯೊಳಗೊಂದು ಮನುಷ್ಯ ಶರೀರ

ಯಮುನಾ ನದಿಯಲ್ಲಿ ಒಂದು ಕೋಣದ ಶರೀರವು ತೇಲುತ್ತಿತ್ತು. ಕೆನಾಲ್ ಆಫೀಸರರು ಆ ಹೆಣವನ್ನು ದಡಕ್ಕೆ ತರಿಸಿ ಪರೀಕ್ಷಿಸಲು ಅದರ ಹೊಟ್ಟೆಯಲ್ಲಿ ಹೊಲಿಗೆಯು ಕಾಣಿಸಿತು. ಸಂಶಯವುಂಟಾಗಿ ಅದನ್ನು ಕತ್ತರಿಸಿ ನೋಡಲು ಒಬ್ಬ ಯುವಕನ ಕುತ್ತಿಗೆಯು ಕಡಿಯಲ್ಪಟ್ಟಿತ್ತು. ಹೊಸ ಉಪಾಯ!

# ಆಧುನಿಕ ಭಾರತದಲ್ಲಿ

**ಡಾ| ಖರೆಯವರ ಆರೋಪಣೆ**

ದಿಲ್ಲಿಯಲ್ಲಿ ನಡೆಯಲಿರುವ ಅಖಿಲ ಭಾರತ ಕಾಂಗ್ರೆಸ್ ಕಮಿಟಿಯ ಸಭೆಯಲ್ಲಿ ಡಾ| ಖರೆಯವರು ಪಾರ್ಲಿಮೆಂಟರಿ ಬೋರ್ಡು ಮತ್ತು ಇತರರ ಮೇಲೆ ಹೊರಿಸಿರುವ ಆರೋಪಣೆಯು ಚರ್ಚೆಗಾಗಿ ಹೆಚ್ಚಿನ ಸಮಯವು ವಿನಿಯೋಗಿಸಲ್ಪಡುವುದೆಂಬುದರಲ್ಲಿ ಸಂಶಯವಿಲ್ಲ.

.... .... ....

ಡಾ| ಯನ್. ಬಿ. ಖರೆಯವರು ಇತ್ತೀಚೆಗೆ ಹೊರಡಿಸಿದ ದೀರ್ಘ ಹೇಳಿಕೆಯಲ್ಲಿ ಹೀಗಂದಿದ್ದಾರೆ: ನಾನು ರಾಜಿನಾಮೆಯಿತ್ತು ನನ್ನ ಸಹ ಮಂತ್ರಿಗಳು ರಾಜಿನಾಮೆಯೀಯಬೇಕೆಂದು ಹೇಳಿರುವುದರಲ್ಲಿ ಅನ್ಯಾಯವಾವುದೂ ಇಲ್ಲ. ಮಹಾಕೋಸಲದ ಮೂರು ಮಂತ್ರಿಗಳು ನನಗೆ ಅವಿಧೇಯರಾಗಿದ್ದು, ಪ್ರಾಮುಖ್ಯತೆಯಲ್ಲಿ ಗಾಂಧಿಜಿಯವರ ಎರಡನೆಯ ಸ್ಥಾನದಲ್ಲಿರುವವರೊಬ್ಬರ ಬೆಂಬಲದಿಂದ ಕೊನೆಗೆ ಪ್ರಧಾನ ಮಂತ್ರಿತ್ವದ ಸ್ಥಾನವನ್ನು ಕೂಡಾ ಪಡೆದರು. ಪಾರ್ಟಿಯಮಾರಿ ನಿರ್ಣಯವು ಪಾಲಿಸಲ್ಪಡಲಿಲ್ಲವೆಂದು ರಾಜೇಂದ್ರಪ್ರಸಾದರು ನನಗೆ ಎಚ್ಚರಿಕೆಯನ್ನೀಯಲಿಲ್ಲ ಮತ್ತು ಅಂತಹ ಎಚ್ಚರಿಕೆಯನ್ನೀಯಲು ಅವರಿಗೆ ಅಧಿಕಾರವಿಲ್ಲ. ಮಂತ್ರಿಗಳು ವೈಯಕ್ತಿಕವಾಗಿ ಗವರ್ನರರನ್ನು ಕಾಣಬಾರದೆಂಬ ಕಾಂಗ್ರೆಸ್ ಪಕ್ಷದ ನಿಯಮವನ್ನು ಶುಕ್ಲರೇ ಮೊದಲಾದವರು ಪಾಲಿಸಲಿಲ್ಲ.

ಡಾ| ಖರೆಯವರು ವಾರ್ಧದಲ್ಲಿ ನಡೆದ ಸಂಗತಿಯನ್ನು ವಿವರಿಸುತ್ತಾ ತಾನು ಕೊಡಬೇಕಾಗಿದ್ದ ಹೇಳಿಕೆಯಲ್ಲಿ ಶೇಕಡಾ ೬೬ ಗಾಂಧಿಜಿಯವರದ್ದಾಗಿದೆ; ಈ ಕುರಿತು ಪಾರ್ಲಿಮೆಂಟರಿ ಬೋರ್ಡಿನವರು ಹೊರಡಿಸಿದ್ದ ಹೇಳಿಕೆಯು ಸರಿಯಲ್ಲ.

ನಾನು ಒಪ್ಪಬೇಕಾಗಿದ್ದ ಸಂಗತಿಗಳೊಂದೂ ಸರಿಯಲ್ಲ. ನನ್ನ ಕುರಿತು



ಯಾವ ವಿಚಾರಣೆಯೂ ಮಾಡಲ್ಪಡಲಿಲ್ಲ. ಗಾಂಧಿಜಿಯವರು ತಯಾರಿಸಿದ ಹೇಳಿಕೆಗೆ ನಾನು ಸಹಿ ಹಾಕಬೇಕೆಂದು ಕೇಳಲ್ಪಟ್ಟಿರುವುದು ನಿರಾಧಾರವೆಂದು ಗಾಂಧಿಜಿಯವರು ಹೇಳಿರುವುದು ಸತ್ಯವಲ್ಲ.

ಮಧ್ಯರಾತ್ರಿಯ ಕತೆಯೊಂದನ್ನು ವಿವರಿಸುತ್ತಾ ಡಾ| ಖರೆಯವರನ್ನುತ್ತಾರೆ- ನಾನು ನನ್ನ ಮರಣಪತ್ರಕ್ಕೆಗೆ ಸಹಿ ಹಾಕದಿದ್ದುದರಿಂದ ವಾರ್ಧಕ್ಕೆ ತರಲ್ಪಟ್ಟೆನು. ಮಧ್ಯರಾತ್ರಿ. ಜಮ್ನಾಲಾಲ ಬಜಾಜರ ಅತಿಥಿ ಆಶ್ರಮದ ಕೋಣೆಯೊಂದರಲ್ಲಿ ಮಲಗಿದ್ದಾಗ ಅನಿರೀಕ್ಷಿತವಾಗಿ ಸುಭಾಷ ಬೋಸರು ಬಂದು ಗಾಂಧಿಜಿಯವರ ಸೂಚನೆಯತೆ ನಾನು ನಡೆಯಬೇಕೆಂದು ಹೇಳಿದರು. ಹಾಗೆ ಮಾಡಿದರೆ ನಾನು ಮಧ್ಯ ಪ್ರಾಂತ್ಯ ಮತ್ತು ಬೀರಾರುಗಳ ಸರ್ವಾಧಿಕಾರಿಯಂತಾಗುವೆನೆಂದೂ, ಮಹಾತ್ಮಾ, ವರ್ಕಿಂಗ್ ಕಮಿಟಿಯೇ ಮೊದಲಾದವರು ಪ್ರಾಂತ್ಯಕ್ಕೆ ಸಂಬಂಧಪಟ್ಟ ಪ್ರತಿಯೊಂದು ವಿಚಾರವನ್ನು ತನ್ನೊಡನೆ ಕೇಳುವರು ಎಂದು ಹೇಳಿದರು. ಕೇವಲ ಅನುಯಾಯಿಯಾಗಿರಲು ಶಕ್ಯವಿಲ್ಲದವರು ಸರ್ವಾಧಿಕಾರಿಯಂತಾಗುವುದು ಸಾಧ್ಯವೆ? ಎಂಬ ಉತ್ತರವನ್ನು ನಾನು ಕೊಟ್ಟೆನು.

.... .... ....

ಮಿತ್ರರೊಡನೆ ಮಾತುಕತೆಗಳನ್ನು ನಡೆಸಿದ ಬಳಿಕ ಅಸತ್ಯವಾದವುಗಳಿಗೆ ಸಹಿ ಹಾಕುವುದು ಸಮಂಜಸವಲ್ಲದಿದ್ದುದರಿಂದ ಹಾಗೆಯೇ ತಿಳಿಸಿದಾಗ ವರ್ಕಿಂಗ್ ಕಮಿಟಿಯು ನನ್ನನ್ನು ದೂರಿ ನನ್ನ ಸಹಮಂತ್ರಿಗಳನ್ನು ಹೊಗಳಿತು. ಮಂತ್ರಿಮಂಡಲದ ಪ್ರಶ್ನೆಯು ಪಕ್ಷದವಿಶ್ವಾಸದ ಮೇಲೆ ಹೊಂದಿಕೊಂಡಿದೆಯೆಂಬ ತತ್ವವು ನಿರಾಕರಿಸಲ್ಪಟ್ಟದೆಯೆಂದು ದಾತಾರರಿಗೆ ಅವರು ಬರೆದ ಪತ್ರದಿಂದ ವ್ಯಕ್ತವಾಗುತ್ತದೆ. ಇದರ ಬದಲಾಗಿ ಮಾರ್ಷಲ್ ಲಾ ಜಾರಿ ಮಾಡಲ್ಪಟ್ಟಿತು.

ವರ್ಕಿಂಗ್ ಕಮಿಟಿಯ ಸೂಚನೆಗನುಸಾರವಾಗಿ ವಾರ್ಧದಲ್ಲಿ ಕರೆಯಲ್ಪಟ್ಟ ಪಾರ್ಟಿ ಮೀಟಿಂಗಿನಲ್ಲಿ ಅಪೀಲು ಮಾಡುವಂತಹ ಒಂದು ಸಂದರ್ಭವು ನನಗಿತ್ತು. ಆದರೆ ಆ ಸಂದರ್ಭವು ನನಗೆ ಕೊಡಲ್ಪಡಲಿಲ್ಲ. ವರ್ಕಿಂಗ್ ಕಮಿಟಿಯು ಮಾಡಿರುವುದು ಸರಿಯೆಂದಾದರೆ ನನ್ನನ್ನು ಧುರೀಣನನ್ನಾಗಿ ಆರಿಸಿದವರೊಡನೆ ಅಪೀಲು ಮಾಡಿಕೊಳ್ಳುವ ಹಕ್ಕನ್ನು ನನಗೆ ಕೊಡದಿರಲು ಕಾರಣವೇನು? ಪ್ರಜಾಸತ್ತಾತ್ಮಕ ಹಕ್ಕುಗಳು ಮೂಲೆಗೊತ್ತಲ್ಪಟ್ಟುವಲ್ಲದೆ ನನ್ನ ಮೇಲೆ "ದಬ್ಬಾಳಿಕೆ"ಯು ನಡೆಸಲ್ಪಟ್ಟಿತು" ಡಾ| ಖರೆಯವರು ಕೊನೆಯದಾಗಿ ಅವರನ್ನು ಸಮರ್ಥಿಸಿದ ಎಲ್ಲಾ ಪತ್ರಿಕೆಗಳನ್ನು ಅಭಿನಂದಿಸಿದ್ದಾರೆ.

... .... ...

## ಮಹಾತ್ಮಾಜಿಯವರ ಉತ್ತರ.

ಮಹಾತ್ಮಾಜಿಯವರು ಡಾ| ಖರೆಯವರ ಹೇಳಿಕೆಗೆ ಉತ್ತರವೀಯುತ್ತಾ ಅವರ ಆರೋಪಗಳ ಯೋಗ್ಯಾಯೋಗ್ಯತೆಯನ್ನು ಜನತೆಯೇ ನಿಷ್ಕರ್ಷಿಸಬೇಕೆಂದು ಹೇಳಿದ್ದಾರೆ. ಅಲ್ಲದೆ ಡಾ| ಖರೆಯವರು ತಮ್ಮ ಸ್ವಂತ ಅಕ್ಷರದಲ್ಲಿ ಹೇಳಿಕೆಯನ್ನು ಬರೆದರೆಂದೂ, ಉತ್ತರ ಕೊಡಬೇಕಾಗಿದ್ದ ಮೂರು ದಿವಸಗಳ ವಾಯಿದೆಯೊಳಗೆ ಅವರು ಉತ್ತರವನ್ನು ಕೊಡಲಿಲ್ಲವೆಂದೂ, ಕಾಂಗ್ರೆಸ್ ಅಧ್ಯಕ್ಷ, ಮೌಲಾನಾ ಸಾಹೇಬ್ ಮತ್ತು ಪಟೇಲರೊಂದಿಗೆ ತಾನು ಮಾತಾಡಿರುವೆನೆಂದೂ ಅವರು ಹೇಳಿದ್ದಾರೆ.

... ... ....

## ಚೀನಾ ವೈದ್ಯಕೀಯ ಮಂಡಲ

ಕಾಂಗ್ರೆಸಿನ ಚೀನಾ ವೈದ್ಯಕೀಯ ಮಂಡಲದವರು ಕಳೆದವಾರ ಮುಂಬಯಿಯಿಂದ ಹೊರಟರು. ಡಾ| ಮದನಮೋಹನ ಅಟಾಲ್‌ರವರು ಶ್ರೀಮತಿ ಸರೋಜನಿ ನಾಯ್ಡುರವರಿಂದ ಕಾಂಗ್ರೆಸ್ ಧ್ವಜವನ್ನು ಸ್ವೀಕರಿಸಿ ಅದರ ಗೌರವವನ್ನು ಕಾಯುವೆನೆಂದರು. ಕವಿರವೀಂದ್ರರು ಕೂಡಾ ಡಾ| ಅಟಾಲರ ವೈದ್ಯಕೀಯ ಮಂಡಲಕ್ಕೆ ಶುಭವನ್ನು ಬಯಸಿದ್ದಾರೆ.



ಈ ವೈದ್ಯಕೀಯ ಮಂಡಲವು ಭಾರತದ ಚಿಕ್ಕದೊಂದು ಸಹಾಯವಾಗಿದೆ. ಸ್ವಾತಂತ್ರ್ಯಕ್ಕಾಗಿ ಹೋರಾಡುವವರೊಡನೆ ಸಹಾನುಭೂತಿಯನ್ನು ವ್ಯಕ್ತಪಡಿಸುವ ಒಂದು ಜೀವಂತ ಸಂಜ್ಞೆಯೇ ಆ ಮಂಡಲವೆಂದು ಸರೋಜಿನಿ ದೇವಿಯರಂದಿದ್ದಾರೆ. ಈ ಮಂಡಲದವರು ಭಾರತದ ಗೌರವವನ್ನು ಹೆಚ್ಚಿಸುವರೆಂಬುದರಲ್ಲಿ ಸಂಶಯವಿಲ್ಲ.

... ... ....

## ಈವಿಯನ್ ಯೋಜನೆ.

ಆಫ್ರಿಕದ ಕೆನಿಯಾದಲ್ಲಿ ಯೆಹೂದಿಯರಿಗೆ ಸ್ಥಳ ಕೊಡಬೇಕೆಂಬ ಸೂಚನೆಯನ್ನು ಈವಿಯನ್ ಯೋಜನೆಯು ಕೊಟ್ಟಿದೆ. ಕೆನಿಯದಲ್ಲಿ ಹೆಚ್ಚಿನ ಫಲವತ್ತಾದ ಭೂಮಿಗಳು ಯುರೋಪಿಯಾನರ ವಶವಿವೆ. ಉಳಿದ ಭಾಗಗಳಲ್ಲಿ ಯೆಹೂದಿಯರಿಗೆ ವಸತಿಯನ್ನು ಕೊಡುವುದರಿಂದ ಆಫ್ರಿಕನರಿಗೂ, ಭಾರತೀಯರಿಗೂ ಇರುವ ಅಲ್ಪ ಸ್ವಲ್ಪ ಹಕ್ಕನ್ನು ಕೂಡಾ ದೋಚಿದಂತಾಗುತ್ತದೆ. ಈ ಕುರಿತು ಕಾಂಗ್ರೆಸಿನ ವಿದೇಶಾಂಗ ಇಲಾಖೆಯ ಕಾರ್ಯದರ್ಶಿಯರಾದ ಡಾ| ರಾಮ ಮನೋಹರ ಲೋಹಿಯಾರವರು ಆ ಯೋಜನೆಯಿಂದ ಭಾರತೀಯರಿಗುಂಟಾಗಬಹುದಾದ ತೊಂದರೆಗಳನ್ನು ವಿವರಿಸಿದ್ದಾರೆ.

.... ... ...

## ಕೇಂದ್ರ ವಿಧಾಯಕ ಸದಸ್ಯತನಕ್ಕೆ ಕಾಂಗ್ರೆಸ್ ಸದಸ್ಯರ ರಾಜಿನಾಮೆ?

ಲಾರ್ಡ್ ಲಿನ್ಲಿತ್ಗೋರವರು ಬರುವ ನವಂಬರ ತಿಂಗಳಲ್ಲಿ ಭಾರತಕ್ಕೆ ಬರುವರೆಂದು ತಿಳಿಯಲಾಗಿದೆ. ಅವರು ಬಂದೊಡನೆಯೇ ಸಿಮ್ಲಾದಲ್ಲಿ ಹೊಸ ಸೆಕ್ರೆಟೇರಿಯಟ್ ತೆರೆಯಲ್ಪಡುವುದು. ಬ್ರಿಟಿಷ್ ಸರಕಾರವು ಫೆಡರಲ್ ಯೋಜನೆಯನ್ನು ಯಾವಾಗ ಜಾರಿಗೆ ತರುವುದೆಂಬುದರ ಸ್ಪಷ್ಟೀಕರಣವಾಗದಿರುವುದರಿಂದ ಕಾಂಗ್ರೆಸ್ ಸದಸ್ಯರು ಕೇಂದ್ರ ವಿಧಾಯಕ ಸಭೆಯ ಕುರಿತು ಯೋಚಿಸುತ್ತಿದ್ದಾರೆ. ಫೆಡರಲ್ ಯೋಜನೆಯು ಬೇಗನೆ ಜಾರಿಗೆ ತರಲ್ಪಡದಿದ್ದರೆ ವಿವಿಧ ಪಕ್ಷಗಳ ಧುರೀಣರ ಸಭೆ ಕರೆದು ಅದು ಜಾರಿಗೆ ಬರುವ ತನಕ ಸಮಾಧಾನಕರವಾದ ಒಂದು ತಾತ್ಕಾಲಿಕ ಏರ್ಪಾಡನ್ನು ಮಾಡುವುದು ಅವಶ್ಯವೆಂದು ಸದಸ್ಯರು

ಭಾವಿಸಲಾರಂಭಿಸಿದ್ದಾರೆ. ಸರಕಾರವು ಮೇಲಿನ ಎರಡು ವಿಧಾನಗಳನ್ನು ಅನುಸರಿಸದೆ ಫೆಡರಲ್ ಪ್ರಶ್ನೆಯನ್ನ ಮುಂದೆ ಹಾಕುತ್ತಾ ಬಂದರ ಕೇಂದ್ರ ವಿಧಾಯಕ ಸಭೆಯ ಕಾಂಗ್ರೆಸ್ ಸದಸ್ಯರು ತಮ್ಮ ಸದಸ್ಯತನಕ್ಕೆ ರಾಜಿನಾಮೆಯಿಡಾಯುವುದು ಖಂಡಿತವೆಂದು ತಿಳಿಯಲಾಗಿದೆ.

.... .... ....

## ತಿರುವಾಂಕೂರಿನ ಸತ್ಯಾಗ್ರಹ.

ತಿರುವಾಂಕೂರಿನಲ್ಲಿ ದಬ್ಬಾಳಿಕೆಯು ನಡೆಯುತ್ತಲೇ ಇದೆ. ಸ್ಟೇಟ್ ಕಾಂಗ್ರೆಸಿನವರ ಚಟುವಟಿಕೆಗಳು ಅವಿಧೇಯವಲ್ಲವೆಂದು ಗಾಂಧಿಜಿಯವರು ಹೊರಡಿಸಿದ ಹೇಳಿಕೆಗೆ ಉತ್ತರವಾಗಿ ದಿವಾನ್ ಸರ್. ಸಿ. ಪಿ. ರಾಮಸ್ವಾಮಿ ಐಯ್ಯರರು ಗಾಂಧಿಜಿಯವರಿಗೆ ನಿಜವಾದ ಪರಿಸ್ಥಿತಿಯ ಅರಿವಿಲ್ಲವೆಂದುತ್ತರವಿತ್ತಿದ್ದಾರೆ. ಕೋಟ್ಯಮ್ಮಿನ ಬಳಿಯಲ್ಲಿ ಮಿಲಿಟರಿಯು ಜನಸಂದಣಿಯ ಮೇಲೆ ಗುಂಡುಗಳನ್ನೆಸೆಯಿತು. ಅನೇಕ ಮಂದಿ ಸತ್ತಿದ್ದಾರೆ ಪೋಲೀಸ್ ಸೈನ್ಯವು ಸಾಲದೆ ೪ನೆ ತರಗತಿಯ ಪೋಲೀಸರನ್ನು ಸೇರಿಸಿಕೊಳ್ಳುತ್ತಿದ್ದಾರೆ. ದಿವಾನ್ ಸರ್. ಸಿ. ಪಿ. ಯವರು ತನ್ನ ಆಳ್ವಿಕೆಯಿಂದಾಗಿ ಎಲ್ಲಾ ಪಂಗಡಗಳ ಸಹಾನುಭೂತಿಯನ್ನು ಕಳೆದುಕೊಂಡಿದ್ದಾರೆ.

.... .... ....



ಮಧ್ಯಪ್ರಾಂತ್ಯದ ಪ್ರಧಾನರಾದ ಪಂಡಿತ
**ರವಿಶಂಕರ ಶುಕ್ಲರು.**

## ಬರ್ಮದ ಅವ್ಯವಸ್ಥೆ.

ಬರ್ಮದಿಂದ ಈಗಾಗಲೆ ಸುಮಾರು ೪೦೦೦ ಕ್ಕಿಂತಲೂ ಮಿಕ್ಕಿ ಭಾರತೀಯರು ಮದ್ರಾಸ್ ಪ್ರಾಂತ್ಯಕ್ಕೆ ಹಿಂತಿರುಗಿ ಬಂದಿದ್ದಾರೆ. ಇದನ್ನು ನೋಡುವಾಗ ಬರ್ಮದಲ್ಲಿ ಭಾರತೀಯರ ಪಾಡು ಬಹಳ ಕಠಿನವೆಂದು ತೋರುತ್ತದೆ. ಪರಿಸ್ಥಿತಿಯ ಕಠಿನಾವಸ್ಥೆಯಿಂದಾಗಿ ಇಂಡಿಯಾ ಸರಕಾರವೂ ತಬ್ಬಿಬ್ಬಾಗಿದೆ. ಈ ಕುರಿತು ಒಂದು ನಿಲುವಳಿ ಸೂಚನೆಯು ಕೇಂದ್ರ ವಿಧಾಯಕ ಸಭೆಯಲ್ಲಿ ಚರ್ಚಿಸಲ್ಪಡುತ್ತಿದೆ. ಬರ್ಮಾ ದಂಗೆಯಿಂದಾಗಿ ಅದೆಷ್ಟೋ ಮಂದಿ ಸತ್ತಿರುವುದಲ್ಲದೆ ೭೪ ಮಸೀದಿಗಳೂ, ೨ ದೇವಸ್ಥಾನಗಳೂ ನೆಲಸಮಗೊಳಿಸಲ್ಪಟ್ಟವೆ. ಸುಮಾರು ೫೦೦ ಮಂದಿ ಭಾರತೀಯರು ಕೊಲ್ಲಲ್ಪಟ್ಟಿದ್ದಾರೆ. ಭಾರತ ಸರಕಾರವು ಈ ಕುರಿತು ಸದ್ಯದಲ್ಲೆ ವಿಚಾರಣೆಯನ್ನು ನಡೆಸಲಿದೆ.

# ಅಂತರಂಗ

ಆದಿತ್ಯವಾರ, ಸಪ್ಟೆಂಬರ್ ೧೧, ೧೯೩೮


## ಜೈಲುಗಳಲ್ಲಿ ಛಡಿ!

ಮುಂಬಯಿ ಸರಕಾರವು ನೇಮಿಸಿದ ವಿಚಾರಣಾ ಸಮಿತಿಯು, ರಾಜಕೀಯ ಕೈದಿಗಳ ದಿನಾಚರಣೆಯಲ್ಲಿ ಭಾಗವಹಿಸಿರುವುದಕ್ಕಾಗಿ ಸೆರೆಹಿಡಿಯಲ್ಪಟ್ಟ ಶ್ರೀ. ಗಂಗಾರಾಮ ಚಾವನ್ ಎಂಬವರಿಗೆ ಬಿಜಾಪುರ ಜೈಲಿನಲ್ಲಿ ಶಿಸ್ತನ್ನು ಮುರಿದುದಕ್ಕಾಗಿ ಸುಪರಿಂಟೆಂಡೆಂಟರು ಛಡಿಯನ್ನು ಕೊಟ್ಟಿರುವುದು ಸರಿಯೆಂದು ಅಭಿಪ್ರಾಯಪಟ್ಟಿದೆ. ಅನಾಗರಿಕ ಪದ್ಧತಿಗಳನ್ನೊಳಗೊಂಡ ಜೈಲ್ ಆಳ್ವಿಕೆಯನ್ನು ಸಂಪೂರ್ಣವಾಗಿ ಬದಲಾಯಿಸುವ ಕಾರ್ಯವನ್ನು ಸರಕಾರವು ಕೈಕೊಳ್ಳಬೇಕೆಂಬುದಕ್ಕೆ ಇದೊಂದು ನಿದರ್ಶನವಾಗಿದೆ.

---

## ಕರ್ನಾಟಕ ಪ್ರಾಂತೀಕರಣ.

ಕರ್ನಾಟಕ ಏಕೀಕರಣ ಕಾರ್ಯಭಾರಿಗಳು ಗಾಂಧಿಜಿ, ವರ್ಕಿಂಗ್‌ಕಮಿಟಿ ಮೊದಲಾದವರಿಗೆ ಕರ್ನಾಟಕ ಪ್ರಾಂತರಚನೆಯ ಮಹದವಶ್ಯಕತೆಯನ್ನು ಮನದಟ್ಟುಮಾಡಲು ಶ್ರೀ. ಕೆ. ಆರ್. ಕಾರಂತರೇ ಮೊದಲಾದವರನ್ನೊಳಗೊಂಡ ಸಮಿತಿಯೊಂದನ್ನು ಕಳುಹಿಸಲು ನಿಶ್ಚೈಸಿರುವುದು ಸ್ತುತ್ಯವಾಗಿದೆ. ಆಂಧ್ರ ಪ್ರಾಂತೀಕರಣವು ಸದ್ಯದಲ್ಲೇ ಆಗುವುದೆಂದು ಸರ್ದಾರ್ ಪಟೇಲರು ಹೇಳುವುದನ್ನು ನೋಡುವಾಗ ಕರ್ನಾಟಕದ ವಿಚಾರವು ಮರೆತು ಹೋದಂತೆ ಕಾಣುತ್ತದೆ. ಕೊಡಗು ಮೊದಲಾದೆಡೆಗಳಲ್ಲಿ ಏಕೀಕರಣ ಪ್ರಚಾರವನ್ನು ಭರದಿಂದ ನಡೆಸಿ, ಕಾಂಗ್ರೆಸ್ ಧುರೀಣರಿಗೆ ಕರ್ನಾಟಕದ ಅಭಿಲಾಷೆಯನ್ನು ತಿಳಿಸಿ, ಆಂಧ್ರದಲ್ಲಿ ನಡೆಯುವಷ್ಟೇ ಭರದಿಂದ ಕರ್ನಾಟಕ ಪ್ರಾಂತೀಕರಣ ಚಳವಳವು ನಡೆಯುವಂತೆ ಮಾಡಬೇಕಾದುದು ಕನ್ನಡಿಗರ ಕರ್ತವ್ಯವಾಗಿದೆ.

---

# ಜೆಕ್ ಸಮಸ್ಯೆ

## -- ಮಧ್ಯ ಯುರೋ

### ಆಸ್ಟ್ರಿಯದ

ಜನಾಂಗ ಸಭೆಯು ರಾಷ್ಟ್ರರಾಷ್ಟ್ರಗಳೊಳಗಿನ ಸಮತೆಯನ್ನುಳಿಸುವುದಕ್ಕಾಗಿ ಸ್ಥಾಪಿಸಲ್ಪಟ್ಟ ರಾಜಕೀಯ ಪಕ್ಷವಾದರೂ ಮಂಚೂಕುವೊ, ಎಬಿಸೀನಿಯ, ಸ್ಪೈನ್ ಆಸ್ಟ್ರಿಯ ಮತ್ತು ಚೀನಾ ಇವೆಲ್ಲ ರಾಷ್ಟ್ರಗಳ ಶೋಚನೀಯ ಘಟನೆಗಳಲ್ಲಿ ಅದಕ್ಕೆ ತನ್ನ ಧ್ಯೇಯವನ್ನು ಕಾರ್ಯರೂಪಕ್ಕೆ ತರಲು ಶಕ್ಯವಾಗಲಿಲ್ಲ. ಇಂದು ಯುರೋಪಿನ ರಾಷ್ಟ್ರಗಳು ಪ್ರಬಲ ರಾಷ್ಟ್ರಗಳೊಡನೆ ಮೈತ್ರಿಯನ್ನು ಬೆಳೆಸುವುದರಲ್ಲಿ ನಿರತವಾಗಿವೆ.

○ ○ ○

ಲಾರ್ಡ್ ರನ್ಸಿಮನರನ್ನು ಜೆಕೊಸ್ಲೊವೇಕಿಯಕ್ಕೆ ಕಳುಹಿಸಿ ಬ್ರಿಟನು ಈಗ ಅಂತರ್ ರಾಷ್ಟ್ರೀಯ ಜವಾಬ್ದಾರಿಯನ್ನು ವಹಿಸಿಕೊಂಡಿದೆ. ಲಾರ್ಡ್ ರನ್ಸಿಮನರು ಅಲ್ಲಿಗೆ ತೆರಳಿರುವುದರಿಂದ ಹಂಗೇರಿ, ಪೋಲೆಂಡ್ ಮೊದಲಾದ ರಾಷ್ಟ್ರಗಳು ಕೂಡಾ ತಮ್ಮ ಅಲ್ಪ ಸಂಖ್ಯಾತರ ಪರವಾಗಿ ವಾದಿಸುತ್ತಿವೆ. ಬ್ರಿಟನು ಕೈಹಾಕದಿರುತ್ತಿದ್ದರೆ ಇಷ್ಟರಲ್ಲಿಯೇ ಜೆಕೊಸ್ಲೊವೇಕಿಯವು ಯುದ್ಧ ರಂಗದಲ್ಲಿರುತ್ತಿತ್ತು. ಜೆಕ್ ಸ್ವಾತಂತ್ರ್ಯವನ್ನು ಉಳಿಸುವ ಕಾರ್ಯದಲ್ಲಿ ಅಮೇರಿಕವೂ ಕೊಂಚ ಹೊಣೆಗಾರಿಕೆಯನ್ನು ವಹಿಸಿಕೊಳ್ಳುವಂತೆ ಮಾಡುವ ಯತ್ನಗಳು ನಡೆಯುತ್ತಿವೆ.

○ ○ ○



ಬ್ರಿಟನು ಜಗತ್ತಿ
ರಾಷ್ಟ್ರವಾಗಿ ಪ
ಧೋರಣೆಯು
ಇಟಲಿಯೊಡನೆ
ಸ್ಪೈನಿನ ಕಾಟಸ್ಥ
ಲಾದುದುಗಳನ್ನು

ಬ್ರಿಟನು ಆನಿ
ಮದ್ಯ ಯುರೋಪಿನ

# ..ತಿಸಲ್ಪಡುವುದೆ?

## ..ನಿನ ಅಭಿರುಚಿ – –

### ..ರಾವರ್ತನೆ



..ಷ್ಟಿಯಾದೊಂದು
..ಧ್ಧತು ಬ್ರಿಟನಿನ
..ನಿನ ಅವ್ಯವಸ್ಥೆ,
..ನಿನ ಧೋರಣೆ,
..ಕ ಇವೇ ಮೊದ
..ದೆ.–ಬೇಕಾದರೆ

..ಚಿಯನ್ನು ತೋರಿಸಲು
..ಬ ಪ್ರಶ್ನೆಯನ್ನು

ಯಾರಿಗೂ ಕೇಳುವಷ್ಟು ಧೈರ್ಯ ವಿಲ್ಲದಾಗಿದೆ. ಹಿಟ್ಲರನು ಆಸ್ಟ್ರಿಯ ವನ್ನು ಕೈವಶಪಡಿಸಿಕೊಳ್ಳುವ ಮೊದಲು ಲಾರ್ಡ್ ಹೆಲಿಫೇಕ್ಸರು ಜರ್ಮನಿಯನ್ನು ಸಂದರ್ಶಿಸಿ ಆ ಅತ್ಯಾಚಾರದಲ್ಲಿ ಬ್ರಿಟನ್ ಕೂಡಾ ಭಾಗವಹಿಸಿದೆಯೆಂಬುದನ್ನು ಸ್ಪಷ್ಟ ಪಡಿಸಿದರು. ಈ ಬಾರಿ ಹೆರ್ ಹಿಟ್ಲರನಿಂದ ಇಂಗ್ಲೆಂಡಿನ ಮಿತ್ರ ರನ್ನು ದೂರಗೊಳಿಸುವ ಯತ್ನವು ನಡೆದಿದೆ. ಆದುದರಿಂದಲೇ ಮುಸ್ಸೋಲಿನಿಯು ಇತ್ತೀಚೆಗೆ ಲಾರ್ಡ್ ರನ್ಸಿಮೇನರು ಫ್ಯಾಸಿಸ್ಟ ವಿರೋಧಿಗಳಾಗಿ ಕೆಲಸ ಮಾಡುವು ದಿಲ್ಲವೆಂದು ಹೇಳಿದುದಾಗಿದೆ.

೦ ೦ ೦

ಲಾರ್ಡ್ ರನ್ಸಿಮೆನರು ಬರುವ ಮೊದಲು ಜೆಕ್ ಸರಕಾರವು ಸ್ವರಕ್ಷಣೆ, ವಿದೇಶ ವಿಚಾರ, ಮತ್ತು ಆರ್ಥಿಕ ವಿಚಾರಗಳನ್ನು ಮಾತ್ರ ಕೇಂದ್ರ ಸರಕಾರಕ್ಕಿಟ್ಟು ಕೊಂಡು ಪ್ರಾಂತಿಕ ಸ್ವಾಯತ್ತೆಯನ್ನು ಕೊಡಲೊಪ್ಪಿತ್ತು. ಆದರೆ ಬೊಹೇಮಿಯದ ಸುಡೇಟನ್ ಅಲ್ಪಸಂಖ್ಯಾತರು ಈ ಸೂಚನೆಯನ್ನು ಅಲ್ಲಗಳೆದರು. ಹಿಟ್ಲರನಿಗೆ ಜೆಕ್ ಸರಕಾರದಲ್ಲಿ ಅಧಿಕಾರವು ಸಿಗಬೇಕಾಗಿದೆ. ಸುಡೇಟನ್ ಜರ್ಮನರ ಧುರೀಣ ಹೆರ್ ಹೆನ್ಲಿನ್ ಇವನಿಗೆ ಕೇಂದ್ರಾಧಿಕಾರದಲ್ಲಿ ಪಾಲು ಬೇಕಾಗಿದೆ.

## ಗೊತ್ತಿದೆಯೆ?

ರಸ್ತೆಗಳಿಗೆ ತಾರು ಹಾಕುವುದರಿಂದ ಕ್ಯಾನ್ಸರ್ ಅಥವಾ ಮಹಾರ್ಬುದವೆಂಬ ರೋಗವುಂಟಾಗುತ್ತದೆಂದು ಫ್ರೆಂಚ್ ವೈದ್ಯರಾದ ಡಾ॥ ಕ್ಲಿಂಗ್‌ರವರು ಹೇಳುತ್ತಾರೆ.

೦ ೦ ೦ ೦ ೦

ಭಾರತದ ಅಂಡರ್ ಸೆಕ್ರೆಟರಿ ಆಫ್ ಸ್ಟೇಟರು ಸದ್ಯದಲ್ಲಿಯೇ ಹಿಂದೂಸ್ಥಾನಕ್ಕೆ ಒರುವುದು ಫೆಡರೇಶನಿನ ಕುರಿತು ಚರ್ಚಿಸಲಿಕ್ಕಿಲ್ಲವಂತೆ.

೦ ೦ ೦ ೦ ೦

ಜನಾಂಗ ಸಭೆಯ ಭಾರತ ಪ್ರತಿನಿಧಿಗಳಾದ ಸರ್ ಸುಲ್ತಾನ್ ಅಹಮದ್‌ರವರು ಆಗಾಖಾನರು ಬರದಿದ್ದರೆ ಭಾರತದ ಪರಿಸ್ಥಿತಿಯು ಕಠಿಣವಾಗುವುದೆಂದು ಹೇಳಲು ಜಿನೇವಕ್ಕೆ ಹೋಗುವರಂತೆ.

---

**ಡ್ಯೂಕ್ ಆಫ್ ವಿಂಡ್ಸರ್**
**ಮತ್ತು**
**ಡಚೆಸ್ ಆಫ್ ವಿಂಡ್ಸರ್**
**ಇವರ**
**ಪ್ರೇಮ ಪ್ರಹಸನದ**
**ಸಚಿತ್ರ ಲೇಖನವನ್ನು ನಿರೀಕ್ಷಿಸಿರಿ.**

---

ಆದರೆ ಜೆಕೊಸ್ಲೊವೇಕಿಯದ ಐದು ಪ್ರಾಂತ್ಯಗಳ ಪುನರ್ವಿತರಣವಾಗದೆ ಈ ಕಾರ್ಯವನ್ನು ಸಾಧಿಸುವುದು ಕಷ್ಟಸಾಧ್ಯವಾಗಿದೆ.

೦ ೦ ೦ ೦

ಪ್ರಾಂತ್ಯಗಳ ಪುನರ್ವಿತರಣದ ಒಂದು ಹೊಸ ಯೋಜನೆಗೆ ಡಾ॥ ಬೆನೆಷರು ಒಪ್ಪಿದ್ದಾರೆ. ಇದಕ್ಕನುಸಾರವಾಗಿ ಹಲವಾರು ಭಾಗಗಳಾಗಿ ವಿಂಗಡಿಸಲ್ಪಡುವ ಜೆಕ್ ರಾಷ್ಟ್ರದ ಮೂರು ಪಾಲುಗಳು ಜರ್ಮನಿಗೆ ಸಿಗುವವು. ಈ ಶರ್ತವನ್ನು ಜರ್ಮನರು ಒಪ್ಪದಿರಲಾರರು. ಕಾರಣ– ಜೆಕೊಸ್ಲೊವೇಕಿಯವನ್ನು ಛಿನ್ನಭಿನ್ನಗೊಳಿಸಿ ಬಲಶೂನ್ಯವನ್ನಾಗಿ ಮಾಡುವುದೇ ಅವನ ಧ್ಯೇಯ.

೦ ೦ ೦ ೦ ೦

ಹೇಗಿದ್ದರೂ ಈ ಅವ್ಯವಸ್ಥೆಯಿಂದ ತನ್ನ ಗೂಡಿನಿಂದ ಹೊರಗೆ ಬಂದ ಬ್ರಿಟನು ಯುರೋಪಿನ ಯುದ್ಧರಂಗದಲ್ಲಿ ಕಾಲಿಡುವಂತೆ ಜಿಕೊಸ್ಲೊವೇಕಿಯವು ಮಾಡಿತು. ಮಧ್ಯ ಯುರೋಪಿನಲ್ಲಿ ಅದು ತನ್ನ ಗೌರವವನ್ನು ಕಳೆದು ಕೊಂಡರೂ ನಾಝೀ ದರ್ಪದ ಗುಟ್ಟನ್ನು ರಟ್ಟು ಮಾಡಿತು.

# ವಿದೇಶ ವಿಚಾರಗಳು

ಯುರೋಪಿನ ಎಲ್ಲಾ ರಾಷ್ಟ್ರಗಳು ತಮ್ಮ ಪೂರ್ಣ ಲಕ್ಷ್ಯವನ್ನು ಜೆಕೊಸ್ಲೊವೇಕಿಯದೆಡೆಗೆ ಹರಿಸಿವೆ. ಹಿಟ್ಲರನು ಪ್ರಜಾಸತ್ತಾತ್ಮಕ ರಾಷ್ಟ್ರವನ್ನು ಚತುರಂಗದಾಟದ ಹಲಗೆಯಾಗಿ ಉಪಯೋಗಿಸಿದ್ದಾನೆ. ಇತರ ರಾಷ್ಟ್ರಗಳ ಪ್ರತಿನಿಧಿಗಳು ಅವನ ಚಾಣಾಕ್ಷತೆಯ ಭಾವಭಂಗಿಗಳನ್ನು ನೋಡುತ್ತಿದ್ದಾರೆ.

೦೦೦

ಬ್ರಿಟನಿನ ಚಾಣಾಕ್ಷತೆಯಿಂದಾಗಿ ಫ್ಯಾಸಿಸ್ಟ್ ಶಕ್ತಿಗಳ ಬಲವನ್ನು ಹೆಚ್ಚಿಸಿದಂತಾಗಿದೆಯೆಂದು ಬ್ರಿಟಿಷ್ ಜನರೇ ಈಗ ಒಪ್ಪಿಕೊಳ್ಳುವಂತಾಗಿದೆ. ಬ್ರಿಟಿಷ್ ಮಂತ್ರಿಮಂಡಲದ ಧುರೀಣರಾದ ಮಿ। ನೆವಿಲ್ ಚೇಂಬರ್ಲೆನರು ರಾಜಕಾರಣದ ರಥ ನಡೆಸಲು ಅಶಕ್ತರೆಂಬುದು ಈಗ ಬಯಲಾಗಿದೆ. ಹೆರ್ ಹಿಟ್ಲರನು ಶಾಂತಿ ಯತ್ನಗಳ ಬುಡಕ್ಕೆ ಕೊಡಲಿಯಿಕ್ಕದಂತೆ ಬ್ರಿಟಿಷರು ಯತ್ನಿಸುವರೆಂಬ ಇತರ ರಾಷ್ಟ್ರಗಳ ಭರವಸೆಯು ನಿಷ್ಫಲವಾಗಿ ಈಗ ಜೆಕೊಸ್ಲೊವೇಕಿಯವು ರಷ್ಯದ ಬೆಂಬಲವನ್ನು ಕೋರುತ್ತಿದೆ.

೦೦೦

ಇಜಿಪ್ಟಿನ ರಾಷ್ಟ್ರೀಯ ವಫ್ದಾ ಪಕ್ಷವು ಪುನಃ ಅಧಿಕಾರಕ್ಕೆ ಬರುವ ಸಂಜ್ಞೆಗಳು ಕಾಣಿಸುತ್ತಿವೆ. ವಫ್ದಾ ಮಂತ್ರಿಮಂಡಲಕ್ಕೂ ರಾಜರಿಗೂ ಒಡಕನ್ನುಂಟುಮಾಡಿದ ಅಲಿ ಮೆಹರ್ ಪಾಶಾ ಎಂಬವರು ಇತ್ತೀಚಿಗೆ ವಫ್ದಾ ಧುರೀಣರಾದ ನಾಹಸ್ ಪಾಶರೊಂದಿಗೆ ಮೈತ್ರಿಯನ್ನು ಬೆಳೆಸಿರುವುದಲ್ಲದೆ ಅಲ್ಲಿಯ ಪತ್ರಿಕೆಗಳಭಿಪ್ರಾಯದಂತೆ ಮಿ। ನಾಹಸ್ ಪಾಶರು ರಾಜಾ ಫಾರೂಕರೊಡನೆ ಉತ್ತಮ



ನಾಹಸ್ ಪಾಶರೊಡನೆ ಮೈತ್ರಿಯನ್ನು ಬೆಳಸಿ ಅವರನ್ನು ಪ್ರಧಾನ ಮಂತ್ರಿಗಳನ್ನಾಗಿ ಮಾಡಲಿಚ್ಛಿಸುವ
**ರಾಜಾ ಫರೂಕ್.**

ಸಂಬಂಧವನ್ನು ಬೆಳೆಸಿ ಸದ್ಯದಲ್ಲಿಯೇ ಮಂತ್ರಿಮಂಡಲವನ್ನು ರಚಿಸುವರು.

೦೦೦

ಈಗ ನಾಹಸ್ ಪಾಶರು ಇಜಿಪ್ಟ್ ಮತ್ತು ಇತರ ದೇಶಗಳಲ್ಲಿ ಜನಪ್ರೀತರಾಗಲು ಯತ್ನಿಸುತ್ತಿದ್ದಾರೆ. ಪೆಲೆಸ್ಟೈನ್ ಸಮಸ್ಯೆಯ ಕುರಿತು ಚರ್ಚಿಸಲು ಅರಾಬ್ ಧುರೀಣರಿಗೆ ಸ್ವಾಗತವನ್ನು ಕಳುಹಿಸಿದ್ದಾರೆ. ವಫ್ದಾ ಪರಿಷತ್ತಿಗೆ ಪಂಡಿತ ಜವಾಹರಲಾಲ ನೆಹರುಗಳನ್ನು ಆಮಂತ್ರಿಸಿದ್ದಾರೆ. ವಫ್ದಾ ಪರಿಷತ್ತಿನ ಯಶಸ್ಸಿನ ಮೇಲೆ ಅವರ ಪ್ರಧಾನ ಮಂತ್ರಿತ್ವವೂ ಹೊಂದಿಕೊಂಡಿದೆ.

೦೦೦

ಮೊನ್ನೆ ಕೈರೋ ನಗರದಲ್ಲಿ ನಾಹಸ್ ಪಾಶರು ಒಂದು ಸಾರ್ವಜನಿಕ ಸಭೆಯನ್ನೇರ್ಪಡಿಸಿದರು. ಅವರ ಜನಪ್ರೀತತೆಯು ಎಂದೋ ಹೋಗಿರುವುದೆಂದೂ ಹೆಚ್ಚೆಂದರೆ ಕೆಲವು ನೂರು ಜನರು ಸೇರಬಹುದೆಂದೂ ಸರಕಾರವು ಭಾವಿಸಿ ಸಭೆಗೆ ಅಪ್ಪಣೆಯಿತ್ತರು. ನಾಹಸ್ ಪಾಶರ ಭಾಷಣಕ್ಕೆ ಸುಮಾರು ೯೦ ಸಾವಿರಕ್ಕಿಂತ ಮಿಕ್ಕಿದ ಜನಸಂದಣಿಯು ಕೂಡಿತ್ತು.

೦೦೦

ಲಾರ್ಡ್ ರನ್ಸಿಮನರು ಸುಡೇಟನ್ ಜರ್ಮನರು ಹಾಗೂ ಜೆಕ್ ಧುರೀಣರನ್ನು ಕಂಡು ಮಾತುಕತೆಗಳನ್ನು ನಡೆಸಿ ರಾಜಿಯಿಂದಲೆ ತೀರ್ಮಾನಿಸುವ ಯತ್ನವನ್ನು ಮಾಡುತ್ತಿರುವುದಿದ್ದರೂ ಹೆರ್ ಹಿಟ್ಲರನಿಗೆ ಜೆಕೊಸ್ಲೊವೇಕಿಯವನ್ನು ಹಲವಾರು ಭಾಗಗಳಾಗಿ ವಿಂಗಡಿಸಿ, ಕ್ರಮೇಣ ಬಲಶೂನ್ಯವಾಗಬಹುದಾದ ಆ ರಾಷ್ಟ್ರವನ್ನು ಜರ್ಮನಿಗೆ ಸೇರಿಸಿಕೊಳ್ಳುವ ಮಹತ್ವಾಕಾಂಕ್ಷೆಯಿರುವುದರಿಂದ ಪರಿಸ್ಥಿತಿಯು ತತ್ಕಾಲಕ್ಕೆ ಕಠಿನವಾಗದಿದ್ದರೂ ಮುಂದೆ ಐರೋ

ಷ್ಯ ಯುದ್ಧವು ಸಂಭವಿಸುವುದರಲ್ಲಿ ನಿರ್ವಿವಾದವೆಂದು ಹೇಳಬಹುದಾಗಿದೆ.

೦೦೦

ಅಮೇರಿಕವು ಇಷ್ಟರ ತನಕ ಐರೋಪ್ಯ ಚಕ್ರವ್ಯೂಹದಿಂದ ದೂರವಾಗಿದ್ದರೂ, ಸರ್ವಾಧಿಕಾರಿಗಳ ಉಪಟಳವು ದಿನೇ ದಿನೇ ಹೆಚ್ಚುತ್ತಿರುವುದರಿಂದ ಯುರೋಪಿನ ಪ್ರಬಲ ರಾಷ್ಟ್ರಗಳಿಗೆ ಈಗಾಗಲೆ ಅಧ್ಯಕ್ಷ ರೂಸ್‌ವೆಲ್ಟರು ಎಚ್ಚರಿಕೆಯಿತ್ತಿದ್ದಾರೆ. ಎಲ್ಲಾ ರಾಷ್ಟ್ರಗಳ ಸೂತ್ರಚಾಲಕರು ರಾಜಧಾನಿಗಳಿಂದ ಹೊರಗೆ ಹೋಗದಂತಹ ಪರಿಸ್ಥಿತಿಯು ಬಂದೊದಗಿದೆ. ಅಮೇರಿಕ, ಫ್ರಾನ್ಸ್ ಮೊದಲಾದ ರಾಷ್ಟ್ರಗಳು ಏಕ ಪ್ರಕಾರವಾಗಿ ಭೂಜಲಸೈನ್ಯಗಳನ್ನು ಹೆಚ್ಚಿಸುತ್ತಿವೆ.

೦೦೦

ಇತ್ತೀಚೆಗೆ ದಕ್ಷಿಣ ಅಮೇರಿಕದಲ್ಲಿರುವ ಬೊಲೀವಿಯ ಮತ್ತು ಪೆರಾಗುವೆ ರಿಪಬ್ಲಿಕ್‌ಗಳೊಳಗೆ ಒಂದು ಪ್ರಾಮುಖ್ಯವಾದ ಸಂಧಿಯು ನಡೆಯಿತು. ಬ್ರೇಝಿಲ್, ಚಿಲಿ, ಪೆರಾಗುವೆ, ಅರ್ಜೆಂಟಿನ ಮತ್ತು ಯುನೈಟೆಡ್ ಸ್ಟೇಟ್ಸ್ ಸರಕಾರಗಳು ಈ ಸಂಧಿಯಲ್ಲಿ ಭಾಗವಹಿಸಿದುವು. ಬೊಲೀವಿಯ ಮತ್ತು ಪೆರಾಗುವೆಗಳೊಳಗೆ ಬಹುಕಾಲದಿಂದ ನಡೆಯುತ್ತಿದ್ದ ವಿವಾದದ ಪರಿಣಾಮವಾಗಿ ಮಾಡಲ್ಪಟ್ಟ ಈ ಒಪ್ಪಂದದಿಂದಾಗಿ ಚಾಕೋ ಬೋರೀಯಲ್ ಎಂಬ ವಿಭಾಗವು ಪೆರಾಗುವೇಗೆ ದೊರಕುವಂತಾಯಿತು.

೦೦೦

ಸ್ಪೈನ್ ಸರಕಾರವು ಕೊನೆಯ ತನಕ ಯುದ್ಧ ಮಾಡಿಯೇ ತೀರುವುದೆಂದು ದೃಢ ನಿರ್ಧಾರವನ್ನು ಮಾಡಿದೆ. ಇತ್ತೀಚೆಗೆ ಸ್ಪೈನಿನ ಮಂತ್ರಿಮಂಡಲಗಳಲ್ಲಿ ಕೆಲವು ವ್ಯತ್ಯಾಸಗಳಾಗಿ ಸರಕಾರದ ಬಲವು ಮತ್ತಷ್ಟೂ ಹೆಚ್ಚಿದೆ. ತನ್ನ ಮಂತ್ರಿಗಳಲ್ಲಿ ಅಪಾರ ವಿಶ್ವಾಸವಿರುವುದ



ಸ್ಪೈನಿನ ವಿದೇಶ ಮಂತ್ರಿಗಳಾದ
**ಸೀನರ್ ಡೆಲ್ ವಯೊರವರು**
ಡಾ|| ನೆಗ್ರಿನರ ಬದಲು ತಾತ್ಕಾಲಿಕ
ಪ್ರಧಾನ ಮಂತ್ರಿಗಳಾಗಿದ್ದಾರೆ.

ರಿಂದ ಪ್ರಧಾನ ಮಂತ್ರಿ ಡಾ|| ನೆಗ್ರಿನ್‌ರವರು ಯುದ್ಧ ಕಾಲದಲ್ಲೂ ಝೂರಿಚ್ ನಗರದ ದೇಹಶಾಸ್ತ್ರದ ಪರಿಷತ್ತಿಗೆ ತೆರಳಿದ್ದಾರೆ. ಅವರ ಪರವಾಗಿ ವಿದೇಶಾಂಗ ಮಂತ್ರಿ ಸೀನರ್ ಡೆಲ್ ವಯೊರವರು ತಾತ್ಕಾಲಿಕ ಪ್ರಧಾನ ಮಂತ್ರಿಗಳಾಗಿದ್ದಾರೆ.

೦೦೦

ಪೆಲೆಸ್ಟೈನ್ ವಿಭಜನಾ ಸಮಸ್ಯೆಯು ಇನ್ನೂ ಬಗೆಹರಿಯಲಿಲ್ಲ. ಬ್ರಿಟಿಷ್ ಸರಕಾರವು ಪೆಲೆಸ್ಟೈನಿನ ಪರಿಸ್ಥಿತಿಯ ಕುರಿತು ವಿಚಾರಿಸುವುದಕ್ಕಾಗಿ ಕಳುಹಿಸಿದ ವುಡ್‌ಹೆಡ್ ಕಮಿಟಿಯು ಈಗಾಗಲೆ ಲಂಡನಿಗೆ ಹೋಗಿರುವುದಲ್ಲದೆ ಸೆಪ್ಟೆಂಬರ್ ತಿಂಗಳ ಅಂತ್ಯಕ್ಕೆ ತನ್ನ ವರದಿಯನ್ನು ಒಪ್ಪಿಸಲಿದೆ. ವಿಭಜನೆಯನ್ನು ಕಾರ್ಯರೂಪಕ್ಕೆ ತರಬಹುದೇ ಎಂದು ಪರೀಕ್ಷಿಸುವುದು ಆ ಕಮಿಷನಿನ ಕೆಲಸವಾಗಿತ್ತು. ಮೊದಲಿನ ಪೀಲ್ ಕಮಿಷನಿನವರು ಸೂಚಿಸಿದಂತೆ ವಿಭಜನೆಯು ಅತ್ಯವಶ್ಯವೆಂಬ ಅಭಿಪ್ರಾಯವು ಆ ಕಮಿಷನಿನವರಿಗಿದ್ದುದಲ್ಲದೆ ಗೊಂದಲದ ಸಮಯದಲ್ಲಿ ವಿಚಾರಣೆ ನಡೆಸಿರುವುದರಿಂದ ಅವರ ಅಭಿಪ್ರಾಯವು ವ್ಯತ್ಯಾಸವಾಗಲಿಲ್ಲವೆಂದು ಊಹಿಸಬೇಕಾಗಿದೆ. ಪರಿಸ್ಥಿತಿಯನ್ನು ಮತ್ತಷ್ಟು ಚೆನ್ನಾಗಿ ತಿಳಿದುಕೊಳ್ಳುವುದು ಅತ್ಯವಶ್ಯವೆಂದು ವಸಾಹತುಗಳ ಕಾರ್ಯದರ್ಶಿಯರಾದ ಮಿ|| ಮೆಕ್ಡೊನಾಲ್ಡರು ಅಲ್ಲಿಗೆ ಅನಿರೀಕ್ಷಿತವಾಗಿ ಹೋಗಿ ಹಿಂತೆರಳಿದರು. ಕಳೆದ ಹನ್ನೆರಡು ತಿಂಗಳುಗಳಿಂದ ಇಂಗ್ಲೆಂಡಿನ ಪೆಲೆಸ್ಟೈನ್ ವಿದೇಶಧೋರಣೆಯು ಅನರ್ಥಕಾರಿಯಾಗಿರುವುದಲ್ಲದೆ, ಅಲ್ಲಿಯ ವಾಣಿಜ್ಯ, ಮತ್ತು ಇನ್ನಿತರ ಎಲ್ಲಾ ಪರಿಸ್ಥಿತಿಗಳನ್ನು ಕೆಡಿಸಿ ಬಿಟ್ಟಿದೆ.

೦೦೦

“ವಿಭಜನೆಯಿಂದಲೇ ಪೆಲೆಸ್ಟೈನಿನಲ್ಲಿ ಶಾಂತಿಯು ಸಾಧ್ಯ’ವೆಂದು ಪೀಲ್ ಕಮಿಷನಿನವರು ಅಭಿಪ್ರಾಯಪಟ್ಟಿದ್ದಾರೆ. ಅರಬರ ಸಂಖ್ಯೆಗಿಂತ ಹೆಚ್ಚು ಮಂದಿ ಯೆಹೂದಿಯರು ಪೆಲೆಸ್ಟೈನಿನಲ್ಲಿದ್ದರೆ ತಮ್ಮ ಜನಾಂಗಕ್ಕೆ ಧಕ್ಕೆ ಬರುವುದೆಂದು ಅವರು ನಂಬುತ್ತಾರೆ. ಆದರೆ

ಬ್ರಿಟಿಷ್ ಸರಕಾರವು ಇತ್ತಂಡದವರನ್ನು ಮೂಲೆಪಾಲು ಮಾಡಿ ತಮ್ಮ ಅಧಿಕಾರವನ್ನು ಎಂದಿನಂತೆಯೇ ನಡೆಸುತ್ತಿರಬೇಕೆಂದು ಆಶಿಸುತ್ತಾರೆ. ಇಂಗ್ಲೆಂಡು ಯಾವ ಧೋರಣೆಯನ್ನನುಸರಿಸುವುದೆಂದು ವುಡ್‌ಹೆಡ್ ಕಮಿಷನಿನವರ ವರದಿಯಿಂದುಂಟಾಗುವ ಪರಿಣಾಮದ ಮೇಲೆ ಹೊಂದಿಕೊಂಡಿದೆ.

ooo



**ಜನರಲ್ ಫ್ರೇಂಕೊ**
ಮುಸ್ಸೋಲಿನಿಯ ಬೆಂಬಲವಿದ್ದರೂ ಹಿಂದಡಿಯಿಡುತ್ತಿದ್ದಾನೆ.

ಜನರಲ್ ಫ್ರೇಂಕನ ಬಲವು ಅಷ್ಟೊಂದು ಯಶಸ್ವಿಯಾಗಿ ಹೋರಾಡುವಂತೆ ಕಂಡುಬರುವುದಿಲ್ಲ. ಇಟಲಿಯಿಂದ ಸೈನ್ಯ ಸರಂಜಾಮಗಳು ಏಕಪ್ರಕಾರವಾಗಿ ಕಳುಹಿಸಲ್ಪಡುತ್ತಿವೆ. ಮಜಾರ್ಕ ದ್ವೀಪದಲ್ಲಿ ತರಬೇತಾದ ವಿಮಾನ ಪಡೆಯವರು ಇತ್ತೀಚೆಗೆ ವೆಲೆನ್ಸಿಯ ಮೇಲೆ ಪ್ರಬಲವಾಗಿ ಬಾಂಬೆಸೆದರು.

## ಶಂಖಿನಿಯೆಂಬ ಮೋಟಾರ್ ಬಸ್

ಕಲ್ಕತ್ತದ ಪ್ರಸಿದ್ಧ ಬರೆಹಗಾರರಾದ ಶ್ರೀ. ಭವಾನಿ ಭಟ್ಟಾಚಾರ್ಯರು "ಮೆಂಚೆಸ್ಟರ್ ಗಾರ್ಡಿಯನ್" ಪತ್ರಿಕೆಯಲ್ಲಿ "ಶಂಖಿನಿಯೆಂಬ ಮೋಟಾರ್ ಬಸ್" ಎಂಬೊಂದು ಸ್ವಾರಸ್ಯದ ಲೇಖನ ಬರೆದಿರುತ್ತಾರೆ:—

ಬಸ್ಸಿನಲ್ಲಿದ್ದವರೆಲ್ಲರೂ ಮಾತಾಡುತ್ತಿದ್ದರು. ತೆಳ್ಳಗಿನ ದೇಹದ ಒಬ್ಬ ವ್ಯಕ್ತಿಯು ಹೀಗೆನ್ನುತ್ತಿದ್ದನು. ಎಂಟು ವರುಷಗಳ ಮೊದಲಿನ ಮಾತು. ಗಾಂಧಿಯವರು ರೌಂಡ್ ಟೇಬಲ್ ಪರಿಷತ್ತಿಗೆ ಹೋಗಿದ್ದರು. ಕಲ್ಕತ್ತದ ಎಲ್ಲಾ ಬಸ್ ಮ್ಹಾಲಿಕರು ಒಟ್ಟು ಸೇರಿ ಮೋಟಾರುಗಳ ಸುಂದರವಾದ ಹೆಸರುಗಳನ್ನು ತೆಗೆದು ಹಾಕಿ ನಂಬ್ರಗಳನ್ನು ಕೊಟ್ಟರು. ನಾನು ಕುಳಿತಿರುವ A ೨೪ರ ಹೆಸರು ಶಂಖಿನಿಯೆಂದಾಗಿತ್ತು. ಈಗ ಬಸ್ಸುಗಳಿಗೆ ಕ್ರಿಮಿನಲ್ ಕೈದಿಗಳಂತೆ A ೨೪ ಎಂದು ಮೊದಲಾಗಿ ನಂಬ್ರಗಳನ್ನು ಕೊಟ್ಟಿದ್ದಾರೆ. ಈಗ ಓಡುತ್ತಿರುವ ಬಸ್ಸು "ಶಂಖಿನಿ"ಯಲ್ಲ. ಆಕೆಯ ಭೂತ.

"ಏನಾಯಿತು, ಹೆಸರಿನಲ್ಲೇನಿದೆ. ಶಂಖಿನಿಯಾದೊಡನೆಯೇ ಬಸ್ಸು ಶಂಖದಂತೆ ಕೂಗುವುದೆ ಎಂದೊಬ್ಬರ ಪ್ರಶ್ನೆಯಾಯಿತು.

ಶಂಖಿನಿಯ ಕುರಿತು ಮಾತಾಡುತ್ತಿದ್ದವರು ತನ್ನ ಮಾತಿನ ಸರಣಿಯನ್ನು ಹರಿಯ ಬಿಟ್ಟರು. ಎಂಥ ಸುಂದರ ಹೆಸರುಗಳವು? ಶಂಖಿನಿ, ಊರ್ಮಿಳಾ, ಚಿತ್ರಲೇಖಾ, ಪಾರ್ವತಿ, ಶಾಕುಂತಳ, ಹಾ! ಅದೆಲ್ಲವೂ ಹಿಂದಿನ ಮಾತಾಯ್ತು. ವಾಣಿಜ್ಯದ ಕುರುಡು ಕಣ್ಣಿಗೆ ಕಲೆಯ ಸೊಬಗೆಲ್ಲಿ ಕಾಣಿಸುವುದು!" ಎಂದು ಹೇಳಿದರವರು. ಮುಂದುವರಿಸುತ್ತಾ—

"ನನಗೆ ಒಂದೇ ಒಂದು ಆಶೆಯಿದೆ. ನನ್ನ ಜೀವನದಲ್ಲಿ ನಾನು ಹಣವನ್ನು ಸಂಗ್ರಹಿಸಿದರೆ ದೊಡ್ಡ ಬಸ್ ಕಂಪೆನಿಯನ್ನು ಮಾಡಿ ಅವುಗಳಿಗೆ ಶಂಖಿನಿ, ಊರ್ಮಿಳಾ ಮೊದಲಾದ ಹೆಸರುಗಳನ್ನು ಕೊಡುವುದು ಖಂಡಿತ. ಅಥವಾ ನಾನು ಕಾರ್ಪರೇಶನಿಗೆ ಆರಿಸಲ್ಪಟ್ಟರೆ ಈ A-೨೪ ನಂಬ್ರಗಳನ್ನು ತೆಗೆಸಿ ಅವುಗಳಿಗೆ ಬೇರೆ ಹೆಸರುಗಳನ್ನು ಇಡಿಸುವೆನು."

ಈ ಮನುಷ್ಯನಾರು? ಎಂಬ ಪ್ರಶ್ನೆಗೆ ಹೀಗೆ ಉತ್ತರವು ದೊರಕಿತು. "ಅವರು ಈಗಾಗಲೇ ಅಂಡಮಾನದಿಂದ ಐದಾರು ವರುಷಗಳ ಶಿಕ್ಷೆ ಅನುಭವಿಸಿ ಹಿಂದೆ ಬಂದ ರಾಜಕೀಯ ಕೈದಿ. ಕ್ರಾಂತಿಕಾರಕ ವಿಶ್ವಾಸವನ್ನು ಗಾಂಧಿಯವರು ಬಿಡಿಸಿದ್ದರಿಂದ ಅವರ ಬಿಡುಗಡೆಯಾಯಿತು. ಅಂಡಮಾನಿನಲ್ಲಿ ಮನುಷ್ಯರ ಹೆಸರುಗಳಿಗೆ ಬದಲು ನಂಬ್ರಗಳನ್ನು ಕೊಡುತ್ತಾರೆ. ಅದೇ ಪಾಡು ಬಸ್ಸುಗಳಿಗೂ ಉಂಟಾಗಿರುವುದರಿಂದ ಅವರಿಗೆ ಬೇಸರವುಂಟಾಗಿದೆ!

# ಜಿಲ್ಲಾ ಸಂಚಾರಿಯ ಡೈರಿಯಿಂದ

**ವಾದ-ಯುದ್ಧ**

ಮಂಗಳೂರಿನ ಶ್ರೀ. ರಂಗರಾವ್ ತಲಚೇರಿಕರರ ಚುನಾವಣೆಯ ಗೊಂದಲವು ಇನ್ನೂ ಮುಗಿಯಲಿಲ್ಲ. ಕರ್ನಾಟಕ ಪ್ರಾಂತಿಕ ಕಮಿಟಿಗೆ ಶ್ರೀ. ರಂಗರಾಯರು ದೊಡ್ಡದೊಂದು ವಿವರಣೆಯನ್ನು ಕಳುಹಿಸಿ ಆ ಕುರಿತು ವಿಚಾರಣೆಯನ್ನು ಮಾಡಬೇಕೆಂದರಂತೆ. ವಿಚಾರಣೆಯನ್ನೇಕೆ ಮಾಡಬೇಕೆಂದು ತಿಳಿಯುವುದಿಲ್ಲವೆಂದು ಪ್ರಾಂ. ಕಾಂ. ಕಮಿಟೆಯ ಕಾರ್ಯದರ್ಶಿಯವರು ಹೇಳಿದರಂತೆ. ವಿಚಾರಣೆ ಮಾಡದೆ ಮ್ಯುನಿಸಿಪಲ್ ಸದಸ್ಯತನಕ್ಕೆ ರಾಜಿಕೊಡೆಂದು ಹೇಳುವುದು ನ್ಯಾಯಸಮ್ಮತವಲ್ಲವೆಂದು ಶ್ರೀ. ರಂಗರಾಯರ ವಾದ. ಪ್ರಾಂತಿಕ ಕಮಿಟೆಯಿಂದ ನ್ಯಾಯವು ದೊರೆಯದಿದ್ದರೆ ೧೯೩೨ರ ಚಳವಳಕಾಲದಲ್ಲಿ ಪೋಲೀಸ್ ಸುಪರಿಂಟೆಂಡರಿಗಿತ್ತ ಉತ್ತರವನ್ನೇ ಕಾಂಗ್ರೆಸಿಗೀಯುವೆನೆಂದು ಶ್ರೀ. ರಾಯರು ಇತ್ತೀಚೆಗೆ ಹೇಳಿದ್ದಾರೆ.

೧೯೩೨ರಲ್ಲಿ ಸರಕಾರಕ್ಕಿದ್ದ ಹಕ್ಕು ೧೯೩೮ರಲ್ಲಿ ಕಾಂಗ್ರೆಸಿಗೆ ಸಿಕ್ಕಿರುವುದರಿಂದ ಶ್ರೀ. ರಾಯರು ಈ ಉತ್ತರವನ್ನು ಕೊಟ್ಟಿರಬೇಕು. ೧೯೩೨ರ ರಾಯರಿಗೂ, ೧೯೩೮ರ ರಾಯರಿಗೂ ಇರುವ ವ್ಯತ್ಯಾಸವನ್ನು ಅವರ ಉತ್ತರವು ಹೇಳುತ್ತಿದೆ. ಅದು ಹೇಗಿದ್ದರೂ ಪ್ರಾಂತಿಕ ಕಮಿಟೆಯವರು ಯೋಗ್ಯ ವಿಚಾರಣೆಯನ್ನು ಆದೇಕೆ ಮಾಡಬಾರದೆಂದು ಅವರಿಗೇ ಚೆನ್ನಾಗಿ ತಿಳಿದಿರಬೇಕು.

ಮಧ್ಯ ಪ್ರಾಂತ್ಯದಲ್ಲಿ ವಾದ ಯುದ್ಧವು ನಡೆಯುತ್ತಿರುವಾಗ ನಮ್ಮ ಕರ್ನಾಟಕವು ಅದೇಕೆ ಹಿಂದುಳಿಯಬೇಕು? ಕರ್ನಾಟಕದ ಕೀರ್ತಿಯನ್ನು ಈ ವಾದದಿಂದಾಗಿ ಹೆಚ್ಚಿಸುತ್ತಿರುವ ಇತ್ತಂಡದವರಿಗೂ ಕನ್ನಡಿಗರು "ಚಿರಋಣಿ"ಗಳಾಗಿರಬೇಡವೆ?

೦೦೦

**ಆಸ್ತಿ ಅಡವಾನ ಬೇಂಕುಗಳು**

ದಕ್ಷಿಣ ಕನ್ನಡದಲ್ಲಿ ಎರಡು ಆಸ್ತಿ ಅಡವಾನ ಬೇಂಕುಗಳು ತೆರೆಯಲ್ಪಟ್ಟವು. ಒಂದು ಉಡುಪಿಯಲ್ಲಿ, ಇನ್ನೊಂದು ಮಂಗಳೂರಲ್ಲಿ. ಇವೆರಡು ಬೇಂಕುಗಳು ಜಿಲ್ಲೆಯ ಹಳ್ಳಿಗರಿಗೆ ಪ್ರಯೋಜನಕಾರಿಯಾಗುವಂತೆ ಬೇಂಕಿನ ಅಧಿಕಾರಿಗಳು ದುಡಿಯುವರೆಂದು ನಿರೀಕ್ಷಿಸಲಾಗಿದೆ.

೦೦೦

**ಉಡುಪಿಯ ನವರಾತ್ರಿ ಮಹೋತ್ಸವ**

ಮುಂಬರುವ ನವರಾತ್ರಿಕಾಲದಲ್ಲಿ ಉಡುಪಿಯ ಶ್ರೀ. ರಾಮಕೃಷ್ಣ ಥಿಯೇಟರಿನವರು ಹಲವು ಸ್ವಾರಸ್ಯದ ಸ್ಪರ್ಧೆಗಳನ್ನೇರ್ಪಡಿಸಿದ್ದಾರೆ. ಮೊದಲನೆಯದಾಗಿ ಅತ್ಯುತ್ಕೃಷ್ಟ ದೇಹವಿರುವವರಿಗೆ ೧೦ ರೂಪಾಯಿಗಳ ಬಹುಮಾನ, ಎರಡನೆಯದಾಗಿ ಗಾಯನ ಸ್ಪರ್ಧೆ, ಅಲ್ಲದೆ ಹಿಂದೀ ಭಾಷಣ ಸ್ಪರ್ಧೆಯು ಕೂಡಾ ನಡೆಯುವುದೆಂದೂ, ಕಲಾಸ್ಪರ್ಧೆಯೊಂದು ಈ ಉತ್ಸವದ ವೈಶಿಷ್ಟ್ಯವೆಂದೂ ಅದೇ ವೇಳೆಯಲ್ಲಿ ಜರಗಲಿರುವ ಕೈಗಾರಿಕೆಗಳ ಪ್ರದರ್ಶನಕ್ಕೂ ಎಲ್ಲರಿಗೆ ಸ್ವಾಗತವಿದೆಯೆಂದೂ ಸಂಬಂಧ ಪಟ್ಟವರು ತಿಳಿಸುತ್ತಾರೆ.

---

# ಸ್ವೀಕಾರ.

**ಸುದರ್ಶನ:**—೩೨ ಪುಟಗಳನ್ನೊಳಗೊಂಡ ಈ ಮಾಸಪತ್ರಿಕೆಯ ಸಂಪಾದಕರು ಶ್ರೀ. ಆರ್. ವಿ. ಜಠಾರ, ಬಿ. ಎ. ಎಲ್‌ಎಲ್. ಬಿ.ಯವರು. ಧಾರವಾಡದಿಂದ ಶ್ರೀ. ಎ. ಎನ್. ಕಾಮತರವರ ಸಂಚಾಲಕತ್ವದಲ್ಲಿ ಹೊರಡುತ್ತಿದೆ. ಸ್ವಾರಸ್ಯದ ಕತೆಗಳನ್ನೊಳಗೊಂಡಿಹೆ. ಹಾ. ಚಂದಾ ರೂ. ೧-೦-೦

* * *

**ಕನ್ನಡ ಜ್ಯೋತಿ:**-ಬೆಂಗಳೂರಿನಿಂದ ಹೊರಡುತ್ತಿರುವ ಕನ್ನಡ ಮಾಸಪತ್ರಿಕೆ. ಸಂಪಾದಕರು: ಶ್ರೀ. ಬಿ. ಸತ್ಯನಾರಾಯಣ ಶರ್ಮ. ಪ್ರಕಾಶಕರು ಶ್ರೀ. ಕೆ. ಎಸ್. ನರಸಿಂಹಯ್ಯ. ಪತ್ರಿಕೆಯಲ್ಲಿ ಚಿಕ್ಕ ಕತೆಗಳೇ ಮೊದಲಾದ ಕೆಲವು ವಿಭಾಗಗಳಿವೆ. ಬಿಡಿಸಂಚಿಕೆಯ ಕ್ರಯ ಒಂದಾಣೆ.

* * *

**ಚಿತ್ರಸಮಾಚಾರ್:**— ಚಲಚ್ಚಿತ್ರಗಳಿಗಾಗಿ ಮೀಸಲಾಗಿರಿಸಿದ ೩೨ ಪುಟಗಳನ್ನೊಳಗೊಂಡ ಮಾಸಪತ್ರಿಕೆ. ವಾ. ಚಂದಾ ರೂ. ೧-೦-೦ ಚಾಮರಾಜಪೇಟೆ, ಬೆಂಗಳೂರು ನಗರದಿಂದ ಪ್ರಕಟವಾಗುತ್ತಿದೆ. ಸಂಪಾದಕರು ಶ್ರೀ. ಯಚ್. ಆರ್. ಕೃಷ್ಣ ಮೂರ್ತಿ. ಪತ್ರಿಕೆಯು ಸಚಿತ್ರವಾಗಿದೆ.

* * *

**ರಾಷ್ಟ್ರಬಂಧು:**—ಮಂಗಳೂರಿನಿಂದ ಕರ್ನಾಟಕದ ಅಗ್ರಸಾಹಿತಿಗಳಲ್ಲೊಬ್ಬರಾದ ಶ್ರೀ. ಕಡೆಂಗೋಡ್ಲು ಶಂಕರ ಭಟ್ಟರ ಸಂಪಾದಕತ್ವದಲ್ಲಿ ಹೊರಡುವ ಪತ್ರಿಕೆ. ವಾ. ಚಂ. ರೂ ೨-೮-೦.



ಸಂಗ್ರಾಹಕರು:—



ಶ್ರೀ. ರಾಯರು

# ❖ ಛಾಯಾ ಲೋಕ ❖

### ಭಾರತದ ಪ್ರಥಮ ವಿಮಾನಪಡೆಯ ಚಿತ್ರ.

ಫಿಲ್ಮ್ ಕಾರ್ಪರೇಶನಿನವರು "ಆಶಾ" ಎಂಬೊಂದು ಚಿತ್ರವನ್ನು ವಿಮಾನಾಧಿಕಾರಿಗಳ ಸಹಾಯದಿಂದ ತಯಾರಿಸುತ್ತಿದ್ದಾರೆ. ಭಾರತದ ಚಲನಚ್ಚಿತ್ರ ಚರಿತ್ರೆಯಲ್ಲಿ ವಿಮಾನಪಡೆಯನ್ನು ಯಶಸ್ವಿಯಾಗಿ ಉಪಯೋಗಿಸಿರುವುದು ಇದೇ ಮೊದಲನೆ ಬಾರಿಯೆಂದು ಹೇಳಲಾಗಿದೆ. ಕಮಲೇಶ ಕುಮಾರಿ ವಿಜಯಕುಮಾರ ಮೊದಲಾದವರು ಇದರಲ್ಲಿ ಭಾಗವಹಿಸಿದ್ದಾರೆ.

* * *

### ಚಕ್ರವರ್ತಿ ಜಹಾಂಗೀರನ ಚಲಚಿತ್ರ.

ಮುಂಬಯಿಯ ಮಿನರ್ವಾ ಕಂಪೆನಿಯ ನಿರ್ದೇಶಕ ಸೊಹರಾಬ್ ಮೋದಿಯವರು "ತಲಾಖ್" ಎಂಬ ಚಿತ್ರವನ್ನು ತಯಾರಿಸುವರು. "ಪುಕಾರ್" ಎಂಬ ಇನ್ನೊಂದು ಚಿತ್ರದಲ್ಲಿ ಜಹಾಂಗೀರನ ಜೀವನವು ಚಿತ್ರಿಸಲ್ಪಡುವುದು. ಚಂದ್ರಮೋಹನ್ ನಾಸೀಮ್ ಮೊದಲಾದವರು ಇದರಲ್ಲಿ ಅಭಿನಯಿಸುವರು.

* * *

### ರೋಸ್ – ಮೋತಿಯರ ನವೀನ ಚಿತ್ರ.

ಸಾಗರ ಕಂಪೆನಿಯ ಪ್ರಸಿದ್ಧ ನಟನಾಗಿದ್ದ ಮೋತೀಲಾಲನು ಸರಸ್ವತಿ ಸಿನೆಟೋನನ್ನು ಸೇರಿದ್ದಾನೆ. ಮಿಸ್ ರೋಸ್ ಮತ್ತು ಅವನು "ಸಚ್ ಹೈ" ಎಂಬ ಚಿತ್ರದಲ್ಲಿ ಅಭಿನಯಿಸುತ್ತಿದ್ದಾರೆ. ಶ್ರೀ. ಚೌಧರಿಯವರು ಕಾಶಿಯಲ್ಲಿ ಇದಕ್ಕೆ ಬೇಕಾದ ದೃಶ್ಯಗಳನ್ನು ಸಂಗ್ರಹಿಸುತ್ತಿದ್ದಾರೆ.

* * *

### ಕುಮಾರಿ ಯೆರ್ಮಲಿನಳ ಶೋಚನೀಯ ಮರಣ.

ಮೂಕ ಚಿತ್ರಗಳ ಕಾಲದಲ್ಲಿ ಖ್ಯಾತಿಯ ತುತ್ತತುದಿಗೇರಿದ್ದ ಕುಮಾರಿ ಯೆರ್ಮಲಿನಳು ಮುಂಬಯಿಯಲ್ಲಿ ಸ್ವರ್ಗಸ್ಥಳಾದಳು.

* * *

### ರಂಗಭೂಮಿಯ ಸಂರಕ್ಷಣೆಗಾಗಿ.

ಮುಂಬಯಿಯ ನಾಟ್ಯಕಲಾ ಪ್ರೇಮಿಗಳು ಆರ್ಥಿಕ ಮಂತ್ರಿಗಳಾದ ಶ್ರೀ. ಎ. ಬಿ. ಲಠ್ಠೆಯವರನ್ನು ಕಂಡು ನಾಟಕ ಕಂಪೆನಿಗಳು ವಿಹಾರ ತೆರಿಗೆಯಿಂದಾಗಿ ದಿನೇ ದಿನೇ ಕಡಿಮೆಯಾಗುತ್ತಿವೆಯೆಂದೂ, ಸರಕಾರವು ಅಂತಹ ತೆರಿಗೆಗಳನ್ನು ತೆಗೆದುಹಾಕಬೇಕೆಂದೂ ಕೇಳಿಕೊಂಡರು.

* * *

### ಲೀಲೆಯ ನೃತ್ಯಕ್ಕೆ ಪ್ಯಾರಿಸ್ ಮರುಳಾಯಿತು.

ಭಾರತದ ಪ್ರಸಿದ್ಧ ಟೆನ್ನಿಸ್ ನಟಿಯಾದ ಲೀಲಾ ರಾವ್-ಎಂಬಾಕೆ ಪ್ಯಾರಿಸಿನಲ್ಲಿ ಕಲಾವಿದರ ಮುಂದೆ ತನ್ನ ನೃತ್ಯವನ್ನು ಮಾಡಿ ತೋರಿಸಿದಳು. ಮ್ಯೂಸಿಜಿಮೆಟ್ ಎಂಬ ಪ್ಯಾರಿಸಿನ ಕಲಾವಿದರ ಸಂಘದ ಪ್ರಮುಖ ಸದಸ್ಯರಾದ ಮೊನ್ಸಿಯರ್ ಫಿಲಿಪ್ ಸ್ಪನಾರ್ರವರು ಆಕೆಯ ಭಾವಭಂಗಿ ಅಜಂತ ಕಲೆಯ ಪ್ರತಿರೂಪದಂತಿದೆಯೆಂದು ಹೇಳಿದರು.

* * *

ಸಾಬುವಿನ ಹೊಸ ಚಿತ್ರವೊಂದನ್ನು ಅಲೆಕ್ಸಾಂಡರ್ ಕೋರ್ಡರವರು ತಯಾರಿಸುವುದರಲ್ಲಿದ್ದಾರೆ. 'ಬರ್ಮಾಸ್ ಸಿಲ್ವರ್'' ಎಂಬುದೇ ಅದರ ಹೆಸರು. ಈ ಚಿತ್ರಕ್ಕೆ ದೃಶ್ಯಗಳನ್ನು ಸಂಗ್ರಹಿಸಲು ಮೈಕೆಲ್ ಪವೆಲ್‌ರವರು ರಂಗೂನಿಗೆ ತೆರಳಿದ್ದಾರೆ. ಮೈಸೂರಿನ ಹುಡುಗನಾದ ಸಾಬುವು ಇದಾದ ಬಳಿಕ 'ಬಗದಾದಿನ ಕಳ್ಳ' ಎಂಬ ಚಿತ್ರದಲ್ಲಿ ಅಭಿನಯಿಸಲಿದ್ದಾನೆ.

* * *

### ಹೊಲಿವುಡ್ಡಿಗೆ.

ಜಗತ್ತಿನ ಪ್ರಸಿದ್ಧ ಪುರುಷರು ಹೆಚ್ಚಾಗಿ ಹೊಲಿವುಡ್ಡಿನಲ್ಲಿ ತಮ್ಮ



ಹೊಲಿವುಡ್ಡಿನ ಸುಪ್ರಸಿದ್ಧ ನಟಿ
ಮಿಸ್. ಕೆರಲಿನ್ ಮೆಡಲೀನಳ
ವಿವಿಧ ಭಾವಭಂಗಿಗಳು.

ಅಭಿರುಚಿಯನ್ನು ವ್ಯಕ್ತಪಡಿಸುತ್ತಾರೆ. ವಿಖ್ಯಾತ ಬರೆಹಗಾರರಾದ ಯಚ್. ಜಿ. ವೆಲ್ಸರು ಹೊಲಿವುಡ್ಡಿನಲ್ಲಿ ಚಿತ್ರಗಳನ್ನು ತಯಾರಿಸುತ್ತಿರುವಾಗ ಪ್ರೊ. ಈನ್‌ಸ್ಟೈನ್‌ರವರು ಹೊಲಿವುಡ್ಡಿಗೆ ಸ್ವಾಗತಿಸಲ್ಪಟ್ಟಿದ್ದಾರೆ. ಇವರು ಚಲಚಿತ್ರದಲ್ಲಿ ಭಾಗವಹಿಸದಿದ್ದರೂ ಕೇವಲ ಪ್ರಚಾರಕ್ಕಾಗಿ ಹೊಲಿವುಡ್ಡಿನ ವಾರ್ನರ್ ಬ್ರದರ್ಸ್‌ರವರು ಅವರ ಹೆಸರನ್ನು ಉಪಯೋಗಿಸುತ್ತಾರೆ. ಇದಕ್ಕಾಗಿ ಕಂಪೆನಿಯವರು ಪ್ರೊ. ಈನ್‌ಸ್ಟೈನ್‌ರವರಿಗೆ ತುಂಬಾ ಹಣವನ್ನು ಕೊಟ್ಟಿದ್ದಾರೆ.

**ಸಿತಾರಾ**

ಎಝ್ರಾ ಮಿರ್‌ರವರ 'ಸಿತಾರಾ' ಒಂಬ ಚಿತ್ರವು ಸದ್ಯದಲ್ಲಿಯೇ ಮುಂಬಯಿಯ "ಫಿಲ್ಮ್ ಸಿಟಿ" ಯಲ್ಲಿ ತಯಾರಾಗುವುದು.

# ವಿಚಿತ್ರವಾದರೂ ಪೂರಾ ಸತ್ಯ



## ಆಕೆಯ ಘಾತಕ ಚುಂಬನ.

ಹುಡುಗಿಯೊಬ್ಬಳು ಪೋಲೀಸ್ ಜವಾನನಿಗೆ ಕಚ್ಚಿ ಕೊಂದ ವಿಚಿತ್ರ ಕತೆಯೊಂದು ಲಂಡನ್ ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಗಾಂಜ್ ಅಂಡ್ರ್ಯೂಸ್ಕ್ ಎಂಬಾಕೆ ಸಾರ್ವಜನಿಕ ಸ್ಥಳವೊಂದರಲ್ಲಿ ತರುಣನೊಬ್ಬನನ್ನು ಮುದ್ದಿಸಿ ಸಾರ್ವಜನಿಕ ನೀತಿಯನ್ನು ಕೆಡಿಸಿದ್ದಕ್ಕಾಗಿ, ಪೋಲೀಸರವನು ಆಕೆಯೊಡನೆ ಮಾತಾಡುತ್ತಿದ್ದಾಗ ಅವನಿಗೆ ಕಚ್ಚಿದಳಂತೆ. ಪೋಲೀಸಿನವನನ್ನು ಆಸ್ಪತ್ರೆಗೆ ಕೊಂಡೊಯ್ಯಲಾಗಿ ಅವನು ಸತ್ತನು. ಪೋಲೀಸ್ ಸ್ಟೇಶನಿನಲ್ಲಿ ಕಚ್ಚಿದಾಕೆ ಹೀಗಂದಳು: "ನಾನವನಿಗೆ ಕಚ್ಚಲಿಲ್ಲ, ನನ್ನ ಚುಂಬನವು ಎಷ್ಟು ಭಯಂಕರವಾದುದೆಂಬುದನ್ನು ತೋರಿಸಿದ್ದು ಮಾತ್ರ."

೦೦೦

## ಸತ್ಯ ಜೀವನದ 'ಟಾರ್ಜನ'ರು

ಪೋಲೆಂಡಿನ ಡಂಪ್ಪೋವೊ ಎಂಬಲ್ಲಿ ಎರಡು ಕಾಡು ಮನುಷ್ಯರಿದ್ದಾರೆ. ಇವರು ಸೈಲೇಸಿಯದವರು. ನಿರುದ್ಯೋಗದಿಂದಾಗಿ ನಾಡಿನಲ್ಲಿ ಬದುಕುವುದು ಕಷ್ಟವೆಂದು ಭಾವಿಸಿ ಕಾಡಿನಲ್ಲಿ ಹಣ್ಣು ಹಂಪಲುಗಳನ್ನು ತಿಂದು ಜೀವಿಸುತ್ತಿದ್ದಾರೆ. ಚಲಚಿತ್ರ ಕಂಪೆನಿಯವರು ಇವರನ್ನು ಕಾಣಲು ಹೋಗಿರುವರು.

೦೦೦

## "ಸಂಚಾರ" ಉದ್ಯೋಗ

ಅಮೇರಿಕದ ಗಣನೆಗನುಸಾರವಾಗಿ ಸಂಚಾರೋದ್ಯೋಗವು ಎಲ್ಲಾ ದೊಡ್ಡ ಕೈಗಾರಿಕೆಗಳಿಗಿಂತ ಮಿಗಿಲಾದುದು. ಬೇಂಕಿಂಗ್, ಮತ್ತು ಮರದ ಕೈಗಾರಿಕೆಗಳಿಗಿಂತ ಇದರ ಪ್ರಾಮುಖ್ಯತೆಯು ಶೇಕಡಾ ೧೮೫ಕ್ಕಿಂತ ಹೆಚ್ಚೆಂದು ಫ್ಲಾಂಡಾ ಚೇಂಬರ್ ಆಫ್ ಕಾಮರ್ಸಿನವರ ಗಣನೆ.

೦೦೦

## ಗೂಡು ತಯಾರಿಸುವ ಫ್ಯಾಕ್ಟರಿ

ಡೆನ್ಮಾರ್ಕಿನ ಜಟ್‌ಲೇಂಡ್ ಎಂಬಲ್ಲಿ ಬಕ ಪಕ್ಷಿಗಳ ಗೂಡನ್ನು ತಯಾರಿಸುವುದಕ್ಕಾಗಿಯೇ ಒಂದು ಫ್ಯಾಕ್ಟರಿಯು ತೆರೆಯಲ್ಪಟ್ಟಿದೆ. ಡೇನಿಷ್ ರೈತರಿಗೆ ಬಕಪಕ್ಷಿಯು ತಮ್ಮ ಮನೆ ಮಾಡಿನ ಮೇಲೆ ಗೂಡು ಕಟ್ಟಿದರೆ ಒಳ್ಳೆ ಶಕುನವೆಂಬ ಒಂದು ವಿಶ್ವಾಸವಿದೆ. ಬಕಪಕ್ಷಿಗಳು ಸಾಮಾನ್ಯವಾಗಿ ಗೂಡು ಕಟ್ಟುವುದರಲ್ಲಿ ಸೋಮಾರಿಗಳಾದುದರಿಂದ ರೈತರು ಗೂಡುಗಳನ್ನು ಕೊಂಡು ಕೊಂಡು ತಮ್ಮ ಮಾಡುಗಳ ಮೇಲಿಡುತ್ತಾರೆ. ಈ ಫ್ಯಾಕ್ಟರಿಯಾದಂದಿನಿಂದ ಅಲ್ಲಿಯ ಹೆಚ್ಚಿನ ಬಕಪಕ್ಷಿಗಳು ಮಾಡುಗಳ ಮೇಲಿರುವ ಗೂಡುಗಳಲ್ಲಿ ವಾಸಿಸಲಾರಂಭಿಸಿವೆ.

೦೦೦

## ಶ್! ಶ್! ಶ್!

ಇಟೆಲಿಯಲ್ಲಿ ಜನರು ತಮ್ಮ ಸಮ್ಮತಿಯನ್ನು ಕೈಚಪ್ಪಾಳೆಯಿಂದ ಸೂಚಿಸುವುದಿಲ್ಲ, ನಾಟಕಶಾಲೆ ಅಥವಾ ಚಲಚ್ಚಿತ್ರ ಶಾಲೆಗಳಲ್ಲಿ ಜನರು ಶ್ ಶ್ ಶ್! ಎಂದು ಫೂತ್ಕರಿಸುವುದೇ ಅಲ್ಲಿಯ ಕ್ರಮ.

---

## ಒಂದಿಷ್ಟು ನಗು

"ನೀವೀಗ ನನ್ನ ಅಭಿಪ್ರಾಯವನ್ನು ಕೇಳಿಯಾಯಿತು, ನನ್ನ ವಿರೋಧವಾಗಿ ನಿಂತಿರುವ ಉಮೇದ್ವಾರರಿಗೆ ನಿಮ್ಮ ಬೆಂಬಲವಿಲ್ಲವಷ್ಟೆ."

"ಅವರು ನಿಂತಿರುವುದರಿಂದ ಅವರಿಗೊಂದು 'ಸೀಟ'ನ್ನಾದರೂ ಕೊಡಬೇಕಲ್ಲವೆ?" ಎಂದೊಬ್ಬ ಸಭಿಕರ ಉತ್ತರ.

೦೦೦

ಹೊಸತಾಗಿ ಮದುವೆಯಾದ ಗಂಡನೊಬ್ಬನು ಫೊಟೋಗ್ರಾಫರರಲ್ಲಿಗೆ ಹೋಗಿ—"ಎಂಥ ಫೊಟೋಗ್ರಾಫಿದು. ನನ್ನ ಮಡದಿ ಕೋತಿಯಂತಾಗಿದ್ದಾಳೆ"

ಫೊಟೋಗ್ರಾಫರನು ಸ್ವಲ್ಪ ಹೊತ್ತು ಯೋಚಿಸಿ—"ನೀವು ಮದುವೆಯಾಗುವ ಮೊದಲೇ ಆ ಕುರಿತು ಯೋಚಿಸಬೇಕಿತ್ತಲ್ಲವೇ?"

# < ಬೇಜವಾಬ್ದಾರಿ! >

**[ಸಾಯಂಕಾಲ ಮೈದಾನಿನಲ್ಲಿ ಕುಳಿತುಕೊಂಡಾಗ ತನ್ನಷ್ಟಕ್ಕೆ ಬಂದ ಭಾವನೆಗಳು]**

●

ಯುರೋಪು ಯುದ್ಧಸಿದ್ಧತೆಗಳನ್ನು ಭರದಿಂದ ಮಾಡುತ್ತಿದೆ. ಜೆಕೊಸ್ಲೊವೇಕಿಯವು ಮುಳ್ಳಿನ ರಾಶಿಯ ಮೇಲೆ ಕುಳಿತಿದೆ. ಆದರೆ ಭಾರತೀಯರು ಈ ಮೈದಾನಿನಲ್ಲಿ ತಿರುಗುತ್ತಿದ್ದಾರೆ. ಗಾಳಿಯನ್ನು ಸೇವಿಸುತ್ತಿದ್ದಾರೆ!

ಹೊರಗಿಂದ ನೋಡುವಾಗ ನಾನು ಇತರರಂತೆಯೇ ಗಾಳಿ ಸೇವಿಸುವವನೆಂದು ನೀವು ಭಾವಿಸಬಹುದು. ಆದರೆ ಭರವಸೆ ಕೊಡುತ್ತೇನೆ. ನಾನಿಲ್ಲಿ ಬಂದು ಕುಳಿತು ಗಾಳಿ ಸೇವಿಸಿರುವದು ಈ ಲೇಖನವನ್ನು ಬರೆದು ಭಾರತೀಯರಿಗೆ ಉಪಕಾರ ಮಾಡಲಿಕ್ಕಾಗಿ. ಭಾರತೀಯರು ಮಹಾ ಜಾಡ್ಯಕ್ಕೊಳಗಾಗಿದ್ದಾರೆ.

ಶಾಂತಿಯನ್ನಾಲಿಂಗಿಸಿರುವ ರಾಷ್ಟ್ರಗಳನ್ನು ಬೆದರಿಸುತ್ತಿರುವ ಈ ಕಾಲದಲ್ಲಿ ಪ್ರತಿಯೊಬ್ಬ ಮುದುಕನೂ ಎದ್ದೇಳಬೇಕಾಗಿದೆ. ಆಹ್ಹಾ! ಆದರೆ, ನನ್ನ ಬಳಿಯಲ್ಲಿರುವ ಸೀಟುಗಳಲ್ಲಿ ಕುಳಿತಿರುವ ಜನರನ್ನು ನೋಡಿ! ನೋಡಿರಿ! ಆ ಮುದುಕ ಕುಡುಗೋಲಿನಂತಿರುವ ಚುರುಟಿನ ಹೊಗೆ ಬಿಡುತ್ತಿರುವುದು. ಅವನಿಗೆ ಸ್ಪೈನಿನಲ್ಲಿ ಎಸೆದ ಬಾಂಬಿನಿಂದಾಗಿ ಪಟ್ಟಣಗಳು ಭಸ್ಮೀಭೂತವಾಗುವ ಅರಿವಿದೆಯೇ? ಅಲ್ಲಿ ನೋಡಿ, ಇಡೀ ಮೈದಾನಿನವರ ಕಿವಿಗೆ ಕರ್ಕಶವಾಗುವಂತೆ ಮಾತಾಡುವ ಆ ಹೆಂಗಸಿಗೆ ಯುರೋಪಿನಲ್ಲಿ ಏನಾಗುತ್ತಿದೆಯೆಂಬ ಅರಿವಿದೆಯೆ?

ಸರಿ. ಈ ಜನರಿಗೆ ಲೋಕದಲ್ಲೇನಾಗುತ್ತಿದೆಯೆಂಬ ಜ್ಞಾನವಿಲ್ಲ. ಅವರಲ್ಲಿ ಅದೆಷ್ಟು ಮಂದಿಗೆ ಗ್ಯಾಸ್‌ಮಾಸ್ಕನ್ನು ಧರಿಸಲು ತಿಳಿದಿದೆ? ಅರೇಬಿಯಾ ಸಮುದ್ರದಾಚೆ ಇರುವ ಇಂಗ್ಲೆಂಡಿನಲ್ಲಿ ಜನರು ಬಿಸಿಲಿನಲ್ಲಿ ಇದ್ದುಕೊಂಡು ಭಾರತೀಯರಂತೆ ಕಂದು ಬಣ್ಣದವರಾಗಲು ಆಶಿಸುತ್ತಿದ್ದಾರೆಂದು ಈ ಕುರಿಜನರಿಗೆ ತಿಳಿದಿದೆಯೆ(ಛೆ! ತಪ್ಪಿದೆ, ನಾನು ಹೇಳಹೋದ ವಿಚಾರವು ಬೇರೆ.) ಆದರೆ ಅತ್ಯಂತ ಗಹನವಾದ ವಿಚಾರದ ಕುರಿತು ಯೋಚಿಸುವಾಗ ಈ ಜನರು ಬೀಡಿ, ಸಿಗರೇಟ್, ಸೀರೆ, ಕ್ರಾಪ್, ಕೋಟುಬೂಟುಗಳ ಚಂದವನ್ನು ನೋಡುತ್ತಿರುವುದು ಸರಿಯೆ?

ಇವೆಲ್ಲವುಗಳ ರಹಸ್ಯವೆಂದರೆ ಈ ಜನರಿಗೆ ಲೋಕಜ್ಞಾನವಿಲ್ಲ. ಸತ್ಯದ ಅಂತರಾಳವನ್ನರಿತು ಮಾಯೆಯನ್ನು ಹೊಡೆದೋಡಿಸುವ ಕಲೆಯು ಇವರಿಗೆ ತಿಳಿದಿಲ್ಲ. ಒಂದೇ ಮಾತಿನಲ್ಲಿ ಹೇಳುವುದಿದ್ದರೆ ಯೋಚನಾ ಶಕ್ತಿಯು ಇವರಲ್ಲಿಲ್ಲ. ಗಟ್ಟಿ ಮಾತಾಡುವವರು ಯಾರಾದರೂ ಇದ್ದರೆ ಅವರು ಹೇಳುವಂತೆ ಕುಣಿಯಲು ತಯಾರಿದ್ದಾರೆ ಈ ಜನರು. ಅದೋ!, ಇನ್ನೊಬ್ಬ ಮತ್ತೊಂದು ದಾರಿ ತೋರಿಸಿದರೆ ಅವನ ಹಿಂದಿದ್ದಾರೆ ಇವರು.

ಅಲ್ಲಿ ನೋಡಿ. ಆ ಹುಡುಗನು ಸರ್ವಾಧಿಕಾರಿ ಹಿಟ್ಲರನಂತೆಯೇ ಕಾಣಿಸುತ್ತಾನೆ. ನೋಡಿದಿರಾ! ಆ ಫುಟ್‌ಬಾಲ್ ಜೆಕೊಸ್ಲೊವೇಕಿಯ. ಹೇಗೆ ತುಳಿಯುತ್ತಾನೆ ನೋಡಿ. ಆದರೆ ನಾವು ಯಥಾರ್ಥವಾಗಿ ಯೋಚಿಸೋಣ. ಈ ಹುಡುಗನು ಸರ್ವಾಧಿಕಾರಿಯಂತೆ ಯಶಸ್ವಿಯಾಗಿ ವರ್ತಿಸಬಲ್ಲನೆ? ಅಲ್ಲಿ ನೋಡಿ! ಆ ಹುಡುಗ ಮುಸ್ಸೋಲಿನಿಯಂತೆ ಕಾಣುವುದಿಲ್ಲವೆ?

ದೇವರಾಣೆ! ನಾವೆಲ್ಲರೂ ಘೋರ ನಿದ್ದೆಯಲ್ಲಿದ್ದೇವೆ. ಭಾರತೀಯರೆ, ಎದ್ದೇಳಿರಿ. ನೋಡಿ! ಅಲ್ಲಿ ನೋಡಿ! ಜಪಾನ್! ಅದನ್ನು ಬಿಡಿರಿ. ರಷ್ಯವನ್ನು ನೋಡಿರಿ. ಅಥವಾ ನಿಮ್ಮ ಕಾಲಡಿಯಲ್ಲಿರುವ ದೊಡ್ಡ ಕಲ್ಲನ್ನು ಹೆಕ್ಕಿರಿ. ಕೂತಲ್ಲಿಂದಲೆ ನಿಮ್ಮ ತಲೆಯಮೇಲೆ ಬಿಸಾಡಿರಿ. ‘ಏಕೆ, ಕೆಲಸವಿಲ್ಲವೆ’ ಎಂದು ಪ್ರಶ್ನಿಸಬೇಡಿ. ಹಾಗಲ್ಲ. . . . . ನೀವು ಹಿಟ್ಲರ್ ಮತ್ತು ಮುಸ್ಸೋಲಿನಿಯರನ್ನು ನೋಡಬೇಕು. ಏನದು? ಜನರಲ್ ಫ್ರೇಂಕನು ಭಾರತೀಯನೊಬ್ಬನನ್ನು ಕೈದು ಮಾಡುವುದೆಂದರೇನು? ನಮ್ಮ ಸರೋಜಿನಿ ದೇವಿಯವರ ತಮ್ಮ ವೀರೇಂದ್ರರನ್ನು ಸ್ಟಾಲಿನ್ ಸೆರೆ ಹಿಡಿಯುವುದೆಂದರೇನು? ನೋಡಿ! ಆಕಾಶದ ಮೇಲೆ ವಿಮಾನ ಬರುವ ವರೆಗೆ ನೋಡುತ್ತಾ ಇದ್ದು ಬಿಡಿರಿ.

ಒಹ್ಹೋ! ನಾನು ಹೇಳುತ್ತಿದ್ದುದು ಬೇರೆ. ಮೈದಾನಿನಲ್ಲಿ ಸಂಜೆಗೆ ವಿಹರಿಸುವವರು ದಡ್ಡರು. ಜಾಡ್ಯ ಹಿಡಿದವರು. ಅವರಿಗೆ ಜವಾಬ್ದಾರಿಯ ಅರಿವಿಲ್ಲ. ನಾವು ಬುದ್ಧ, ಕೃಷ್ಣರ ನಾಡಿನವರಾದರೆ ಸ್ವರ್ಗದಿಂದೊಂದು ಕರೆಯು ನಮ್ಮನ್ನು ‘ಏಳಿರಿ, ಎದ್ದೇಳಿರಿ’ ಎಂದು ಹೇಳದಿರಲಾರದು. ಹೌದು. ನಮ್ಮನ್ನು!

—K. K. S

# ವಾರದ ಪಂಚಾಂಗ

ಬಹುಧಾನ್ಯ ಸಂರದ ಭಾದ್ರಪದ ಕೃಷ್ಣ ಪಕ್ಷ ದಕ್ಷಿಣಾಯನಂ ವರ್ಷರ್ತುಃ ಸಪ್ಟಂಬರ

✻

ಸಿಂಹ (ಸೋಣ) ೨೬ರಿಂದ ಕನ್ಯಾ ೧೮ರವರೆಗೆ. ಮಹಾನಕ್ಷತ್ರ ಹುಬ್ಬಾ—ಉತ್ತರಾ

## ಆರ್ಯಭಟ ವಾಕ್ಯಕರಣರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 11 | ೨ | ರ೫೨||| | ಉಭ೪೧ | ಗಂ೪೮ | ತೈ೨೩ | ೪| | ೨೮||| | ಯಮ೨ |
| 12 | ೩ | ಚ೫೧| | ರೇ೪೧|| | ವೃ೪೪| | ವ೨೨ | ೧೧|| | ೩೫|| | ಮೇಷೇಚ೪೧||ಮ೪ಕು೩೬ |
| 13 | ೪ | ಕು೪೮||| | ಅ್ವ೪೧ | ಧ್ರು೩೯||| | ಬ೨೦| | ೩೧ | ೨೩| | ಉತ್ತರಾರ್ಕಃ೨೩||ಸಂಕಷ್ಟ೪ಪ್ರದೊ. [* ಮ. ಭರಣೀ |
| 14 | ೫ | ಬು೪೫| | ಭ೩೯|| | ವ್ಯಾ೩೪| | ಕೌ೧೭ | ೪|| | ೨೭||| | ವೃಷೆಚ೫೩||ಮ೪ಬು೩೦ಸ್ವಾ೩ಶು೦* |
| 15 | ೬ | ಗು೪೦||| | ಕೃ೩೬||| | ಹರ್೨೮ | ಗ೧೩ | ೮| | ೩೧ | ಪ್ರದೋಷಃ ದಗ್ಧಯೋಗಃ೬ [§ ಕೃಷ್ಣಜನ್ಮಾಷ್ಟಮೀತಿಸ್ರಾ. |
| 16 | ೭ | ಶು೩೫||| | ರೋ೩೩|| | ವ೨೧| | ಭ೮| | ೧೪|||<br>ವಿ೪೬||| | ೨೬ | ಕನ್ಯಾಸಂ.೪೬||| ಸೌರೇ ಪುನಃ ಶ್ರೀ§<br>ಮಿಥುನೇಚ೧||ಹ೧ಕು೫೨ಹು೧ಬು |
| 17 | ೮ | ಶ೩೦ | ಮೃ೨೯||| | ಸಿ೧೪ | ಬಾ೩ | ೪೯|| | ೯| | ೦ವಿಟ್ಲಪಿಂಡಿ ತಿಸ್ರಾ ಸ್ವಾ೪ಶು೪೨ |

## ಕೇತಕೀ ದೃಕ್ಸಿದ್ಧರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 11 | ೨ | ರ೫೦| | ಉಭಾ೩೬||| | ಗಂ೪೩ | ತೈ೧೯||| | ಶೆ.೪ | ೨೪|| | ವ್ಯ. ಪ್ರ. ೩ ನಿ.೧೬| |
| 2 | ೩ | ಚ೪೯ | ರೇ೩೮| | ವೃ೪೦ | ವ೧೯||| | ೭||| | ೩೨ | ಮೇಷೇಚ೩೮| ಮ೪ಕು೩೦ |
| 13 | ೪ | ಕು೪೭|| | ಅ್ವ೩೮|| | ಧ್ರು೩೬| | ಬ೧೫| | ೨೮|| | ೨೦|| | ಉತ್ತರಾರ್ಕಃ೪||ಸ್ವಾ೩ಶು೫೩ಸಂ.೪ |
| 14 | ೫ | ಬು೪೫| | ಭ೩೮ | ವ್ಯಾ೩೨ | ಕೌ೧೬|| | ೨|| | ೨೬ | ವೃಷೇಚ೫೨|||ಮ೪ಬು೧೮ ಭರಣಿ* |
| 15 | ೬ | ಗು೪೨ | ಕೃ೩೬||| | ಹರ್೨೬||| | ಗ೧೩||| | ೭|| | ೩೧ | ರೆ೨ವಶ೩೪ [* ಶ್ರಾದ್ಧಂ |
| 16 | ೭ | ಶು೩೮ | ರೋ೩೪||| | ವೃ೨೧ | ಭ೧೦ | ೧೫||<br>ವಿ೪೮ | ೨೭ | ಉತ್ತ೨ರ ಕನ್ಯಾಸಂಕ್ರಮ.೨೯|೫೧ [‡ ೪ ಸ್ವಾ೪ಶು೫ |
| 17 | ೮ | ಶ೩೩| | ಮೃ೩೧||| | ಸಿ೧೪|| | ಬಾ೫|| | ೪೨ | ೧೧ | ಮಿಥುನೇಚ೩| ಪೂ೧ಕು೪೬ ಪೂ೧ಬು‡ |

# ಈ ವಾರದಲ್ಲಿ ನಿಮ್ಮ ಭವಿಷ್ಯ ಹೇಗಿದೆ?

**ತಾರೀಕು ೧೧-೯-೧೯೩೮ರಿಂದ**
**ತಾರೀಕು ೧೭-೯-೧೯೩೮ರ ವರೆಗೆ.**

## ಮೇಷ:—

ನಿಮಗೆ ಈ ವಾರವು ಕೆಲವು ಭಾಗದಲ್ಲಿ ಉತ್ತಮವಿರುವುದು. ಪ್ರಕೃತಿ ಸುಖವು ಚೆನ್ನಾಗಿರುವುದು. ವ್ಯಾಪಾರ ವ್ಯವಹಾರ ಇತ್ಯಾದಿ ನಾನಾ ವಿಷಯದಲ್ಲಿ ಧನಲಾಭವಾಗುವುದು. ಕೈಕೊಂಡ ಕಾರ್ಯಗಳಲ್ಲಿ ವಿಜಯಿಗಳಾಗುವಿರಿ. ಸಮಾಜದಲ್ಲೆಲ್ಲಿಯೂ ಸ್ಥಾನಮಾನಗಳು ದೊರೆಯುವವು. ಅನೇಕ ಹೊಸ ಮಿತ್ರರೂ ಆ ಮಿತ್ರರಿಂದಾಗಿ ಲಾಭವೂ ಕೂಡ ಆಗುವುದು. ಇಷ್ಟೆಲ್ಲಾ ಸೌಭಾಗ್ಯಗಳಿದ್ದರೂ ನಿಮಗೆ ಸಂಸಾರದಲ್ಲಿ ಸ್ವಲ್ಪವೂ ಸುಖವಿಲ್ಲ. ಪತ್ನೀಪುತ್ರರು ಅವಿಧೇಯರಾಗಿ ವರ್ತಿಸುವುದರಿಂದ ನಿತ್ಯವೂ ಜಗಳ ತಪ್ಪಿದ್ದಲ್ಲ. ಅಧಿಕಾರಿಗಳ ಭಯದಿಂದಾಗಿ ದುಃಖಭಾಗಿಗಳಾಗುವಿರಿ. ಇವೇ ಮೊದಲಾದ ಅನೇಕ ದುಃಖಪರಂಪರೆಗಳನ್ನನುಭವಿಸುವಿರಿ. ತಾ. 13. 14. ಮತ್ತು 17 ಈ ದಿನಗಳು ಸ್ವಲ್ಪ ಮಟ್ಟಿನ ಶುಭದಾಯಕಗಳಾಗಿವೆ. ಕಾರ್ಯಜಯ ಧನಲಾಭ.

## ವೃಷಭ: —

ಹಣವನ್ನು ಸಂಪಾದಿಸುವ ಉದ್ಯೋಗಕ್ಕೆ ಈ ವಾರವು ಸುಸಂಧಿಯೆಂದು ಧಾರಾಳವಾಗಿ ಹೇಳಬಲ್ಲೆವು. ನೀವು ಆರಂಭಿಸಿದ ಕಾರ್ಯಗಳು ನಿಮ್ಮ ಇಷ್ಟಪೂರ್ತಿಯನ್ನು ಸದ್ಯದಲ್ಲೇ ಮಾಡುವವು. ಹೋದಲ್ಲೆಲ್ಲಾ ನಿಮಗೆ ಜಯದೊರೆಯುವುದು. ಅನೇಕರು ನಿಮ್ಮ ಅನುಯಾಯಿಗಳಾಗುವರು. ಆದರೂ ಇತರ ಪ್ರಬಲ ದೋಷದಿಂದಾಗಿ ಶತ್ರುಗಳ ಭಯವು ಹೆಚ್ಚುವುದು. ಅದಕ್ಕಾಗಿ ಕೆಲವು ದುರ್ಜನರ ಸ್ನೇಹವನ್ನು ಬೆಳೆಸುವಿರಿ. ಇದರಿಂದ ಮಾನಹಾನಿಯೂ ಧನಹಾನಿಯೂ ಆಗುವುದು. ಆರೋಗ್ಯ ಭಾಗ್ಯವು ನಿಮ್ಮಿಂದ ತೊಲಗುವುದು. ತಾ. 13 14 ಮತ್ತು 17 ಈ ದಿನಗಳಲ್ಲಿ ರೋಗೋಪದ್ರವವು ಸ್ವಲ್ಪ ಹೆಚ್ಚಾಗುವುದು.

## ಮಿಥುನ: —

ದಾರಿದ್ರ್ಯ ಸೂಚಕವಾದ ದುರ್ಮನಸ್ಸು ನಿಮ್ಮಲ್ಲಿ ಬಹಳೇ ಹೆಚ್ಚುವುದು. ಆದಕಾರಣ ನೀವು ಬಾಯಲ್ಲಿ ಹೇಳುವುದೊಂದು ಕೃತಿಯಲ್ಲಿ ಮಾಡುವುದು ಮತ್ತೊಂದು. ಆತ್ಮಸಾಕ್ಷಿಗೆ ವಿರೋಧವಾಗಿ ನೀವು ಕಾರ್ಯಗೈಯುವುದರಿಂದ ಕಳ್ಳರಂತೆ ಹೆದರಿಕೊಂಡಿರಬೇಕಾಗುವುದು. ಇತರರಿಂದ ಕೆಟ್ಟ ಮಾತನ್ನು ಕೇಳುವಿರಿ. ಆದರೂ ಮಿತ್ರಾನುಕೂಲವು ಬಂಧುಗಳ ಸಹಾಯವು ತುಂಬಾ ಇವೆ. ಕಳ್ಳಕಾಕರಿಂದಲೂ ಪುತ್ರರಿಂದಲೂ ಧನಲಾಭವಾಗುವುದಿದೆ. ನಿಮ್ಮ ಆರೋಗ್ಯವು ಕೆಡುವುದರಿಂದಲೂ ಕೆಲವು ವಿಷಯಗಳಲ್ಲಿ ಹಣಕ್ಕೆ ಖರ್ಚಿರುವುದರಿಂದಲೂ ವ್ಯಸನಾಕ್ರಾಂತರಾದ ನಿಮ್ಮ ಮುಖಾರವಿಂದವು ತೇಜೋಹೀನವಾಗುವುದು. ಕರ್ಮಪ್ರಾಪ್ತಿಯ ಯೋಗವೊಂದು ನಿಮಗೆ ಕಂಡು ಬರುತ್ತದೆ. ತಾ. 11 ರಿಂದ 14ರ ವರೆಗಿನ ದಿನಗಳು ಉತ್ತಮವಿರುವುದರಿಂದ ಸುಖ, ಇಷ್ಟಸಿದ್ಧಿ, ಮಿತ್ರಲಾಭ.

## ಕರ್ಕಾಟಿಕೆ:—

ಈ ವಾರವು ನಿಮ್ಮ ಭವಿಷ್ಯವು ಬಹಳ ಚಿಂತಾಜನಕವಾಗಿರುವುದು. ಬುಧ ಹೊರತಾದ ಸಕಲ ಗ್ರಹರೂ ನಿಮ್ಮ ಅನಿಷ್ಟಾಕಾಂಕ್ಷಿಗಳೇ ಆಗಿರುವರು. ಚತುರ್ಥ ಕೇಂದ್ರದಲ್ಲಿ ಶುಕ್ರನಿದ್ದರೂ ಆತನು ವಿದ್ಧನಾದ ಪ್ರಯುಕ್ತ ಅಶುಭವೇ ಆಗಿರುವನು. ಆದಕಾರಣ ನಿಮ್ಮ ಚಿತ್ತವು ಚಂಚಲವಾಗುವುದು. ಪರವಂಚನೆಯಲ್ಲೇ ನಿಮ್ಮನ್ನು ಪ್ರೇರೇಪಿಸುವುದು ಧರ್ಮವಿಷಯದಲ್ಲಿ ಬಹಳ ದೂರಾಗುವಿರಿ. ನಿಮಗೆ ವೈರಿಗಳು ಹೆಚ್ಚುವರು. ಎಷ್ಟೊಂದು ಜಾಗ್ರತೆಯಿಂದ ವ್ಯವಹಾರ ಮಾಡಿದರೂ ಎಲ್ಲರೊಡನೆ ಕಲಹ ಉಂಟಾಗುವುದಲ್ಲದೆ ಮಾನಭಂಗವೂ ಕೂಡ ಆಗುವುದು. ಅನೇಕ ರೀತಿಯಲ್ಲಿ ಧನವ್ಯಯವಾಗುವುದು. ಈ ರೀತಿ ಯಾಗಿ ನಿಮ್ಮ ಮನಸ್ಸಿಗೆ ಎಳ್ಳಷ್ಟೂ ಸಮಾಧಾನವಿಲ್ಲದಿರುವುದರಿಂದ ನಿದ್ರೆ ಬಾರದು. ಅನ್ನ ಸೇರದು. ಇದರಿಂದಾಗಿ ಆರೋಗ ಪ್ರಕೆಟ್ಟ ಉಷ್ಣ ಪಿತ್ಥ ಸಂಬಂಧವಾದ ರೋಗವು ಉಂಟಾಗುವುದು. 13 ರಿಂದ 16ರ ವರೆಗಿನ ದಿನಗಳಲ್ಲಿ ಕಾರ್ಯದಲ್ಲಿ ಅಪಜಯವಾದರೂ ಧನಲಾಭ, ಇಷ್ಟಸಿದ್ಧಿ.

## ಸಿಂಹ: —

ಶುಭಗ್ರಹರೆಲ್ಲರೂ ಅನುಕೂಲರಾಗಿರುವುದರಿಂದಲೂ ಪಾಪಿಗ್ರಹರೆಲ್ಲರೂ ಪ್ರತಿಕೂಲರಾಗಿರುವುದರಿಂದಲೂ ನಿಮಗೆ ಈ ವಾರದಲ್ಲಿ ಶುಭಾಶುಭ ಫಲಗಳು ಮಿಶ್ರವಾಗಿ ಸಮಾನವಾಗಿ ಪರಿಣಮಿಸುವವು. ಈ ವಾರದಲ್ಲಿ ಪ್ರವಾಸವು ಒಳ್ಳೆಯದಲ್ಲ. ಕಾರಣ ಹೆಚ್ಚಾದ ಆಯಾಸವೂ ಹಾನಿಯೂ ಸಂಭವಿಸುವದು. ಶತ್ರುಗಳಿಂದಾಗಿ ದೇಹಕ್ಕೆ ಪೀಡೆಯುಂಟಾಗುವುದು. ನೀವು ಪ್ರಾರಂಭಿಸಿದ ಕಾರ್ಯಗಳಲ್ಲಿ ಜಯಶೀಲರಾಗುವಿರಿ. ನಿಮ್ಮಲ್ಲಿ ಒಳ್ಳೇ ಚುರುಕು ಬುದ್ಧಿಯೂ, ವಾಚಾಲತೆಯೂ ಇರುವುದರಿಂದ ಎಲ್ಲಾ ಕಡೆಗಳಲ್ಲೂ ಪೂಜ್ಯತ್ವವನ್ನು ಹೊಂದುವಿರಿ. ನಾನಾ ರೀತಿಯಿಂದ ಧನ ಸಂಪಾದಿಸುವಿರಿ. ಅಲ್ಲದೆ ಒಳ್ಳೇ ಭೋಗಿಗಳಾಗುವಿರಿ. ನಿಮ್ಮ ಸ್ತ್ರೀ ಪುತ್ರರ ಅಗಲುವಿಕೆಯಿಂದಲೂ, ಶರೀರ ಪೀಡೆಯಿಂದಲೂ ಕೂಡ ದುಃಖವುಂಟಾದೀತು. ತಾ 15 ರಿಂದ 17ರ ವರೆಗಿನ ಸಮಯವು ಬಹಳ ಒಳ್ಳೇದಿರುವುದು. ಮಹಾ ಸುಖ, ಇಷ್ಟ ಕಾರ್ಯಸಿದ್ಧಿ, ಸಂತೋಷ

## ಕನ್ಯಾ:—

ಶುಕ್ರನು ಶುಭಸ್ಥಾನಗತನಾಗಿದ್ದರೂ ಕೇತುವಿನಿಂದ ವಿದ್ಧನಾದ ಪ್ರಯುಕ್ತ ಅಶುಭನಾದನು. ರವಿಯು ಅಶುಭ ಸ್ಥಾನದಲ್ಲಿದ್ದರೂ ಗುರುವಿನಿಂದ ವಿದ್ಧನಾದ

ಪ್ರಯುಕ್ತ ಶುಭನಾಗಿರುವನು. ಅಂತೂ ನವಗ್ರಹರ ಪೈಕಿ ರವಿಯೊಬ್ಬನೇ ನಿಮ್ಮ ಹಿತಾಕಾಂಕ್ಷಿಯು. ಆತನು ಗ್ರಹ ರಾಜನಾಗಿರುವುದರಿಂದ ದೇಹಾರೋಗ್ಯವನ್ನೂ, ಶತ್ರುಗಳ ಪೀಡೆಯು ಪರಿಹಾರವನ್ನೂ, ಶೋಕನಾಶವನ್ನೂ ಕೂಡ ಮಾಡಲು ಶಕ್ತನಿರುವನು. ಇತರ ಗ್ರಹರಿಂದಾಗಿ ಹಣವ್ಯಯವಾಗುವುದು. ಸ್ತ್ರೀಯುರೊಡನೆ ಕಲಹನಾಗುವುದು. ಪಿತ್ಥ ವಿಕಾರವೂ ನೇತ್ರ ಸಂಬಂಧಿಯಾದ ರೋಗವೂ ಉಂಟಾಗುವುದು. ಮನೋವ್ಯಥೆಯು ಬಹಳವಾಗಿ ಪೀಡಿಸುವದು. ಪ್ರವಾಸವು ಸಂಭವಿಸುವದು. ಸ್ತ್ರೀಯಿಂದಾಗಿ ಕೆಟ್ಟದ್ದಾಗಲಿದೆ. ವಿವಾದದಿಂದಾಗಿ ಧನವ್ಯಯವಾಗುವದು. ಆದ ಕಾರಣ ನೀವೀ ವಾರ ಬಲು ಜಾಗರೂಕರಾಗಿರತಕ್ಕದ್ದು. ಆದರೂ "ಭವಿತವ್ಯಂ ಭವತ್ಯೇರ ನಾಳಿಕೇವ ಫಲಾಂಬುವತ್" ಎಂಬಂತೆ ಆಗತಕ್ಕದ್ದು. ತೆಂಗಿನಕಾಯಿಯೊಳಗೆ ಹೇಗೆ ನೀರು ತುಂಬುವದೋ ಅಂತೆಯೇ ಆಗತಕ್ಕದ್ದು ಆಗಿಯೇ ತೀರುವುದು. ವಾರಾದಿ ಮತ್ತು ಅಂತ್ಯ ದಿನವುಶುಭವಿದೆ.

**ತುಲಾ:—**

ರವಿಕುಜರು ಏಕಕಾಲದಲ್ಲಿ ವೇಧ ದೋಷದಿಂದಾಗಿ ಕೆಟ್ಟಿರುವುದರಿಂದ ಅನಿಷ್ಟಫಲದಾಯಕರಿರುವರು. ಆದರೂ ಈ ವಾರದಲ್ಲಿ ನಿಮಗೆ ಹೆಚ್ಚಾಗಿ ಒಳ್ಳೆಯದೇ ಆಗುವದು. ಗೃಹಕೃತ್ಯದ ಭಾಗವು ಸಂಪೂರ್ಣ ಚೆನ್ನಾಗಿರುವುದರಿಂದ ನೀವು ತೃಪ್ತರಾಗಿರುವಿರಿ. ಮಿತ್ರರ ಸಹಾಯವು ಚೆನ್ನಾಗಿರುವುದು ಸಂಸಾರ ಭಾಗದಲ್ಲೂ ಏನೂ ಕೊರತೆಯಿಲ್ಲವು. ಭೋಗಿಗಳಾದ ನಿಮ್ಮ ಇಷ್ಟಕ್ಕೆ ಎಲ್ಲವೂ ಅನುಕೂಲವಾಗಿರುವವು. ಆರೋಗ್ಯ ವಿಷಯದಲ್ಲಿ ಸ್ವಲ್ಪ ಹಾನಿಯಿರುವುದು, ಮತ್ತು ಶತ್ರುಗಳ ತಂಟೆಯೂ ನಿಮಗಿರುವುದು. ಇದರಿಂದ ನಿಮ್ಮ ಮನಸ್ಸು ಖೇದಗೊಳ್ಳುವದು. ಆದರೂ ಈ ದೋಷಗಳು ಸಂಭವಿಸಲು ಇತರ ಗ್ರಹರ ತಡೆಯಿರುವದು. ತಾ. 11 ರಿಂದ 14ರ ವರೆಗಿನ ದಿನಗಳಲ್ಲಿ ಶುಭವೇ ಆಗುವುದು.

**ವೃಶ್ಚಿಕ:—**

ಕಾರ್ಯಗಳಲ್ಲಿ ಅಪಜಯವು ಪ್ರಾಪ್ತವಾಗುವುದರಿಂದಲೂ, ಅನೇಕರು ನಿಮ್ಮ ಶತ್ರುಗಳಾಗಿ ಅಪಕಾರ ಮಾಡುವುದರಿಂದಲೂ ಮನಸ್ಸಿಗೆ ಹೆಚ್ಚಾದ ಕ್ಲೇಶವುಂಟಾಗುವುದು. ಆದರೂ ಪರಿಜನರ ಆದರದಿಂದಲೂ ಪುತ್ರಲಾಭದಿಂದಲೂ ಕೂಡ ಸುಖಿಗಳಾಗುವಿರಿ. ಶರೀರದ ಆರೋಗ್ಯವು ಕೆಡುವುದು. ಪುತ್ರರು ಮತ್ತು ಸೇವಕರು ಇವರುಗಳೊಡನೆ ಕಲಹವಾಗುವುದಲ್ಲದೆ ಮರ್ಯಾದೆಗೆ ಹಾನಿಯೂ ಕೂಡ ತಗಲುವದು. ತಾ. 13 ರಿಂದ 16ರ ವರೆಗಿನ ದಿನಗಳಲ್ಲಿ ಹೆಚ್ಚಿನಂಶ ಒಳ್ಳೆಯದೇ ಆಗುವುದು. ಮಣಿ ಮೊದಲಾದ ರತ್ನಗಳ ಲಾಭವಾಗುವುದು. ಆರೋಗ್ಯ, ಧನಲಾಭ, ಶಯನ ಸುಖಗಳುಂಟಾಗುವವು

**ಧನು:—**

ದುಷ್ಟಗ್ರಹರು ಬಲವತ್ತರರಿರುವುದರಿಂದ ನಿಮಗೆ ಈ ವಾರದಲ್ಲಿ ಹೆಚ್ಚಾಗಿ ಅಶುಭಗಳು, ಅನಿಷ್ಟಗಳು ಆಗುವವು. ಅನುಕೂಲಗ್ರಹರಾದ ಕೇವಲ ರವಿ ಶುಕ್ರರಿಂದಾಗಿ ಶತ್ರುಪೀಡೆಯ ಪರಿಹಾರವಾಗುವದು. ಸ್ಥಾನ ಪ್ರಾಪ್ತಿಯಾಗುವದು ಮಾತ್ರವಲ್ಲ, ಅಭಿವೃದ್ಧಿಯೂ ಮಿತ್ರಜನರಿಂದಾಗಿ ಲಾಭವೂ ಕೂಡ ಆಗಲಿದೆ. ಇತರ ಅನಿಷ್ಟದಾಯಕ ಗ್ರಹರಿಂದಾಗಿ ಅಂಗಾಂಗಗಳಲ್ಲಿ ನೋವುಂಟಾಗುವುದು. ಕಾರ್ಯವು ಕೊನೆಗಾಣದು. ದೇಹಪೀಡೆಯಿಂದಲೂ ಕಾರ್ಯವು ವಿಪರೀತವಾಗುವುದರಿಂದಲೂ ವ್ಯಸನಾಕ್ರಾಂತರಾದ ನಿಮ್ಮ ದೇಹವು ಕ್ಷೀಣವಾಗಿ ಬಲಹೀನವಾಗುವುದು. ಸುಹೃತ್, ಮಿತ್ರ, ಭಾರ್ಯ, ಇವುಗಳಿಂದ ವಿರಹಿತರಾದ ನಿಮ್ಮ ಮನಸ್ಸು ಚಂಚಲವಾಗಿ ದುಷ್ಕರ್ಮದಲ್ಲಿ ನಿಮ್ಮನ್ನು ಪ್ರೇರೇಪಿಸುವದು. ತಾ. 11 ರಿಂದ 14ರ ವರೆಗಿನ ದಿನಗಳಲ್ಲಿ ಈ ದೋಷಗಳು ಅಧಿಕವಾಗಿ ಕಂಡುಬರುವವು.

**ಮಕರ:—**

ಈ ವಾರದಲ್ಲಿ ನಿಮ್ಮ ಸ್ಥಿತಿಯು ಹೆಚ್ಚಿನಮಟ್ಟಿಗೆ ಸುಧಾರಿಸಿರುವುದು. ವಾರದ ಮಧ್ಯಭಾಗದಲ್ಲಿ ಶತ್ರುಪೀಡೆಯೂ, ಸ್ವಸ್ತ್ರೀ ವಿರೋಧವೂ, ಹಣದ ಖರ್ಚು ಇತ್ಯಾದಿಗಳು ಅಧಿಕವಾಗಿ ಕಂಡುಬಂದರೂ ಇಡೀ ವಾರದಲ್ಲಿ ನಿಮ್ಮ ಕಾರ್ಯವು ಜಯಶೀಲವಾಗುವುದು. ವಸ್ತ್ರಾಭರಣಗಳ ಲಾಭವಾಗುವುದು. ಮಿತ್ರವರ್ಗದವರ ಸಮಾಗಮವಾಗುವದು. ನಾನಾರೀತಿಯಿಂದ ಲಾಭಹೊಂದುವಿರಿ. ಬಲಿಷ್ಠರಾದ ಶತ್ರುಗಳನ್ನೂ ಕೂಡ ಅನಾಯಾಸದಿಂದ ಜಯಿಸುವಿರಿ. ನೀವೀ ವಾರದಲ್ಲಿ ಹೆಚ್ಚಾಗಿ ಜಾಗ್ರತೆಯಿಂದಿರತಕ್ಕದ್ದು. ಇಲ್ಲದಲ್ಲಿ ಕಲಹವು ಸಂಭವಿಸಿ ಬಹಳ ಹಾನಿಯಾಗಲಿದೆ. ವಾರದ ಆದ್ಯಂತ ಭಾಗಗಳು ಉತ್ತಮವಿವೆ

**ಕುಂಭ:—**

ಈ ರಾಶಿಯವರಿಗೆ ಈ ವಾರದಲ್ಲಿ ಬಹಳ ದುಷ್ಟಫಲಗಳನ್ನು ಅನುಭವಿಸಲಿರುವುದು. ಇತರರಲ್ಲಿ ಕಲಹವುಂಟಾಗುವುದರಿಂದ ತದ್ರೂಪವಾಗಿ ಧನವು ಖರ್ಚಾಗುವುದು. ಈ ಧನನಾಶದಿಂದಲೂ ಶರೀರಪೀಡೆಗೆ ಕಾರಣಗಳಾದ ನೇತ್ರ ರೋಗ, ಉದರ ರೋಗ ಇವುಗಳಿಂದಲೂ ಹೆಚ್ಚಾಗಿ ದುಃಖಿತರಾದ ಇವರ ಬುದ್ಧಿಯು ಬಹಳ ಮಂದವಾಗುವುದು. ಇಷ್ಟಲ್ಲದೆ ಈ ಮಧ್ಯೆ ಪ್ರವಾಸವೂ ಕೂಡ ಸಂಭವಿಸುವದು. ಈ ಪ್ರಕಾರವಾಗಿ ಚಿಂತಾಮಗ್ನರಾಗುವುದರಿಂದ "ಸಂತೋಷವೇ ಯೌವನ, ಚಿಂತೆಯೇ ಮುಪ್ಪು" ಎಂದಂತೆ ಸರ್ವ ವಿಧದಲ್ಲಿಯೂ ಮುದುಕರಂತೆ ವರ್ತಿಸುವರು. ತಾ. 13 14 ಈ ದಿನಗಳ ಮಟ್ಟಿಗೆ ಸ್ವಲ್ಪ ಉತ್ತಮವಿರುವುದರಿಂದ ಕಾರ್ಯದಲ್ಲಿ ಜಯ, ಕಿಂಚಿದ್ಧನಲಾಭ, ಸ್ತ್ರೀಸುಖ ಇತ್ಯಾದಿಗಳನ್ನು ಹೊಂದುವರು.

**ಮೀನ:—**

ನಿಮಗೀವಾರದಲ್ಲಿ ಕುಜ ಬುಧ ಶುಕ್ರರು ಸ್ವಭಾವತಃ ಶುಭಸ್ಥಾನಗತರಾಗಿದ್ದರೂ ವಿದ್ಧನಾದ ಪ್ರಯುಕ್ತ ಅಶುಭವೇ. ಗುರುವು ಅನಿಷ್ಟಸ್ಥಾನಗತನಾಗಿದ್ದರೂ ವಾಮವೇಧದಿಂದ ಶುಭವೇ ಆಗಿರುವನು. ಆದಕಾರಣ ಈ ವಾರದಲ್ಲಿ

(೪೯ನೇ ಪುಟ ನೋಡಿರಿ.)

# ಹಾರ್ಟ್ ಫೈಲಿಯರ್

ನಾಟಕಕಾರರು: ದೃಶ್ಯ ೨ ಪಂ. ಎಸ್. ಎ. ಆಚಾರ್.

(ಕಳೆದ ಸಂಚಿಕೆಯಿಂದ ಮುಂದರಿದುದು.)

(ವಕೀಲರ ಮನೆ. ಇರ್ವರು ಕಕ್ಷಿಗಾರರೊಡನೆ ಏನನ್ನೊ ಮಾತನಾಡುತ್ತ ವಕೀಲನು ವೇತ್ರಾಸನದಲ್ಲಿ ಕುಳಿತಿರುವನು. ಪಾರ್ಶ್ವದಲ್ಲೊಂದು ಪೆಟ್ಟಿಗೆಯ ಬದಿಯಲ್ಲಿ ಕುಳಿತು ಗುಮಾಸ್ತನು ಏನನ್ನೋ ಬರೆಯುತ್ತಿರುವನು. ಅಷ್ಟರಲ್ಲಿ ಮೋಹನನೂ ಪೇದೆಯೂ ಪ್ರವೇಶಿಸುವರು.)

ಪೇ:—ನಮಸ್ಕಾರ ಸ್ವಾಮಿ (ಎಂದು ವಕೀಲರಿಗೆ ಕೈಮುಗಿಯುವನು)

ವ:—(ಕೈಯೊಂದನ್ನು ಸ್ವಲ್ಪ ಮೇಲಕ್ಕೆತ್ತಿ ಪ್ರತಿ ನಮಸ್ಕಾರ ಮಾಡಿದಂತೆ ನಟಿಸಿ) ಇವರಾರು?

ಪೇ:—ನಮ್ಮ ಸಾಂತಪ್ಪನವರ ಪ್ರತಿವಾದಿಗಳು ಮೋಹನರಾಯರೆಂದರೆ ಇವರೆ.

ವ:—ಓಹೋ, ಇವರೆಯೊ ಮೋಹನರಾಯರೆಂದರೆ. (ಮೋಹನನನ್ನು ಕುರಿತು) ಇಲ್ಲಿ ಕುಳಿತುಕೊಳ್ಳಿ. ಏನು ಹಣ ತಂದಿರುವಿರೊ?

ಮೋ:—ಹಣವನ್ನು ತರುವುದಾದರೆ ಇಲ್ಲಿಗೇತಕ್ಕೆ ಬರುತ್ತೇನೆ.

ಪೇ:—ಈಗ ತಾನು ಬಲು ಕಷ್ಟದಿಂದಿರುವುದರಿಂದ ಒಂದಾವರ್ತಿ ಹೇಗೂ ಬಿಡುಗಡೆ ಮಾಡಿಸಬೇಕೆಂದು ಕೇಳಿಕೊಳ್ಳಲು ನಿಮ್ಮಲ್ಲಿಗೆ ಬಂದಿರುವರು.

ವ:—ಮೋಹನರಾಯರೆ, ಆ ಅಧಿಕಾರವು ನನಗೆಲ್ಲಿಯದು? ನಿಮ್ಮ ವಾದಿಯು ನಾವಲ್ಲ. ನಾನೋರ್ವ ವಕೀಲನು. ಕಕ್ಷಿಗಾರನು ಹೇಳಿದಷ್ಟನ್ನು ಮಾತ್ರ ಮಾಡುವುದು ನನ್ನ ಕೆಲಸ ನಿಮ್ಮ ವಾದಿಗಳೀಗಲೆ ಇಲ್ಲಿಗೆ ಬರಬಹುದು. ಏನಿದ್ದರೂ ಅವರೊಡನೆ ಕೇಳಿಕೊಳ್ಳಬಹುದು.

(ಅಷ್ಟರಲ್ಲಿ ಸಾಂತಪ್ಪನು ಗಡಿಬಿಡಿಯಿಂದ ಪ್ರವೇಶಿಸುವನು. ನೆಟ್ಟನೆ ವಕೀಲರ ಪಾರ್ಶ್ವಕ್ಕೆ ಹೋಗಿ ಬಂತು ಬಗ್ಗಿ ಕೈಮುಗಿದು)

ಸಾಂ:—ಸ್ವಾಮಿ ನಮಸ್ಕಾರ.

ವಕೀಲ:—(ಸಾಂತಪ್ಪನನ್ನು ದೃಷ್ಟಿಸಿ) ಓಹೊ, ಸಾಂತಪ್ಪನವರೇ. ಬನ್ನಿ ಕುಳಿತುಕೊಳ್ಳಿ.

ಸಾಂ:—ಇರಲಿ. ನಿಂತರೂ ಪರ್ವಾ ಇಲ್ಲ. ಹಣ ೧೦ ಏನಾದರೂ ವಸೂಲಾಯಿತೆ?

ವ:—ನಾನೇನೂ ವಸೂಲಿ ಮಾಡಲಿಲ್ಲ. ನೀವು ಹೇಳಿದ ಮೇರೆಗೆ ಹಣ ಕೊಡುವವರನ್ನು ವಾರಂಟಿನಿಂದ ಹಿಡಿಸಿ ಇಲ್ಲಿಗೆ ತರಿಸಿರುವೆನು. ತೆಗೆದುಕೊಳ್ಳುವವರು ನೀವಿರುವಿರಿ. ವಸೂಲಿ ಮಾಡುವ ಕೆಲಸವು ನನ್ನದಲ್ಲ. ರುಸುಂಗಿಸುಂ ಏನಾದರು ತಂದಿದ್ದರೆ ಇಲ್ಲಿ ಕೊಡಿ.

ಸಾಂ:—ಅದಿರಲಿ, ಮೋಹನನನ್ನು ಎಲ್ಲಿಗೆ ತರಿಸಿರುವಿರಿ?

ವ:—(ಮೋಹನನ್ನು ತೋರಿಸಿ) ಏನು, ನೀವಿನ್ನೂ ಕಾಣಲಿಲ್ಲವೆ? ಮೋಹನರಾಯರೆ! ಇಲ್ಲಿಗೆ ಬನ್ನಿ (ಮೋಹನನು ಸಮೀಪವನ್ನೈದುವನು) ಇವರೇ ಅಲ್ಲವೆ ನಿಮ್ಮ ಪ್ರತಿವಾದಿಗಳು.

ಸಾಂ:—(ಮೋಹನನ್ನು ನೋಡಿ) ಓಹೋ ಮೋಹನ! ನೀನಿಲ್ಲಿರುವೆಯಾ? ಏನು ರೂಪ್ಯಾಗಿಪ್ಯಾ ಹಿಡಿದುಕೊಂಡು ಬಂದಿರುವಿಯಾ?

ಪೇ:—ಅದಿರಲಿ, ಸಾಂತಪ್ಪನವರೆ! ನಿಮಗಿವರು ಬರಿಯ ಪ್ರತಿವಾದಿಗಳೆಯೋ? ಅಥವಾ ಇನ್ನೇನಾದರು ಸಂಬಂಧವಿದೆಯೊ?

ಸಾಂ:—ಬೇರಾವ ಸಂಬಂಧವೂ ಇಲ್ಲ.

ಪೇ:—(ಮೋಹನನನ್ನು ಕುರಿತು) ಇದೇನು ರಾಯರೆ! ನೀವಲ್ಲವೆ ಆಗ ಹೇಳಿದ್ದು? ಸಾಂತಪ್ಪನವರು ನನ್ನಕ್ಕನ ಗಂಡನೆ”ಂದು.

ಸಾಂ:—(ಸ್ವಗತ) ಓಹೊ, ಇವನು ಪಕ್ಕಾ ಕಳ್ಳ. ಸಂಬಂಧಗಿಂಬಂಧವೇನನ್ನಾದರು ಹೂಡಿ ನನಗೇನಾದರು ಮಂಕು ಬೂದಿ ಹಾಕಿ ಬಿಡಿಸಿಕೊಳ್ಳಬಹುದೆಂದು ಆಲೋಚಿಸಿದ್ದಾನೆ. ಹೂಂ, ಹಾಗೆ ನಾನು ಸಾಂತಪ್ಪ, ಹಣದಾಸೆಯಿಂದ, ಕೈಹಿಡಿದು ನನ್ನನ್ನೆ ಗತಿಯೆಂದು ನಂಬಿದ ಹೆಂಡತಿಯನ್ನೂ ನೀರಿಗೆ ದೂಡಿದ ಸಾಂತಪ್ಪ. ಇನ್ನಾಕೆಯ ತಮ್ಮನು ಈತನೆಲ್ಲಿ? (ಪ್ರಕಾಶಂ) ಸಂಬಂಧವೇನೊ ಮೊದಲಿದ್ದಿದ್ದರೂ ಇದ್ದಿರಬಹುದು. ಈಗ ಮಾತ್ರ ನಷ್ಟವಾಗಿರುವುದು.

ಪೇ:—ಅಂದರೆ, ಅದು ಹೇಗೆ?

ಸಾಂ:–"ಅದು ಹೇಗೆ" ಅವನ ಅಕ್ಕ, ನನ್ನ ಹೆಂಡತಿ, ಈಗೆಲ್ಲಿರುವಳು? ಸತ್ತು ಎಷ್ಟೋ ವರ್ಷಗಳು ತೀರಿದುವು, ಹೀಗೆ. ಈಗ ತಿಳಿಯಿತೆ?

ಪೇ:—ಮತ್ತೂ ಒಂದು ಸಾಂತಪ್ಪನವರೆ! ಹಣ ವಲ್ಲವೆ ಅದು, ಆದರ ಮುಂದೆ ಇನ್ನಾವ ಸಂಬಂಧವಿದೆ?

ಸಾಂ:—(ಸ್ವಲ್ಪ ರೇಗಿ) ನಿನಗೇನಿಲ್ಲಿ ಮೂರನೆಯವ ನಿಗೆ ಕೆಲಸ? ಆ ವಿಚಾರವೆಲ್ಲವನ್ನೂ ನಾವು ಮಾಡಿ ಕೊಳ್ಳುವೆವು. ಕೆಲಸವೆಷ್ಟೋ ಅಷ್ಟನ್ನು ಮಾಡು.

ಪೇ:—ಮೋಹನರಾಯರೇ! ನೀವು ನಡೆಯಿರಿ ಮನೆಗೆ. ಇಂತಹ ಪಾಪಿಯ ಬಗ್ಗೆ ಸುಳ್ಳನ್ನಾಡಿದರೂ ಪಾಪವಿಲ್ಲ. ನೀವು ಊರಲ್ಲೆ ಇಲ್ಲವೆಂದು ನಾನು ನ್ಯಾಯಾ ಧೀಶರಿಗೆ ಅರಿಕೆಮಾಡಿಕೊಳ್ಳುವೆನು.

ಸಾಂ:—(ಗಾಬರಿಗೊಂಡು) ಅಂದರೆ ಇವನಾರು ವಕೀಲರೆ?

ವ:—ಮೋಹನರಾಯರನ್ನು ವಾರಂಟಿನಿಂದ ಹಿಡಿದು ತಂದಿರುವ ಪೇದೆಯೆ ಈತನು.

ಸಾಂ:—ಹಾಗೊ, (ಪೇದೆಯ ಸಮೀಪ ಸಾರಿ ಬಗ್ಗಿ ಕೈಮುಗಿದು) ಮಾರಾಯಾ, ನಾನು ತಿಳಿಯದೆ ಮಾತ ನಾಡಿದೆ. ಒಮ್ಮೆ ಕ್ಷಮಿಸುವೆಯಾ?

ಪೇ:—ಅದೆಲ್ಲ ಮಾಡುವ. ಈ ವಾರಂಟಿನ ಗಲಭೆ ಯಿಂದ ಇಂದೊಂದು ಸಿಂಗಲು ಕಾಫಿಯನ್ನೂ ಕುಡಿಯ ಲಿಲ್ಲ. ಏನಾದರೂ ಕಾಫಿಯ ಕಾಸಿದ್ದರೆ ಕೊಡಿರಿ.

(ಸಾಂತಪ್ಪನು ನಾಲ್ಕೈದು ಚೀಲಗಳೊಳಗೆ ಕೈ ಹಾಕಿ ಒಂದು ಪೈಯನ್ನು ತೆಗೆದು ನೀಡಿ)

ಸಾಂ:—ಇಕೊ ಮಾರಾಯಾ! (ಕೊಡುವನು)

ಪೇ:—(ಕೈನೀಡಿ ತೆಗೆದುಕೊಂಡು ಪೈಯೆಂದು ತಿಳಿದು) ಇದೇತಕ್ಕೊಂದು ಪೈಯು? ಬೆಲ್ಲ ತಿಂದು ನೀರು ಕುಡಿಯಲೋ? ಬೇಡ, ನಿಮಗೆ ಇರಲಿ. (ಎಂದು ಬಿಸುಡು ವನು)

ಸಾಂ:—ನೀನೊಂದು ಕಾಸೆಂದಿ. ನಾನಾದರೂ ಎರಡು ಕಾಸಿನ ಒಂದು ಪೈಯನ್ನೆ ,ಇತ್ತು ಬಿಟ್ಟೆನು. ಅದನ್ನೂ ಈಗ ಬೇಡವೆನ್ನುವಿ. (ಪೈಯನ್ನು ಹೆಕ್ಕಿ) ಇಕೊ ತೆಗೆದುಕೊಳ್ಳು, ಆ ಅರೆ ಹೊಟ್ಟೆಗೂ ಬಾಳದ ಸಿಂಗಲ್ ಕಾಫಿಗೀಫಿ ಕುಡಿದು ಹೊಟ್ಟೆ ಹಣ ಎರಡನ್ನೂ ಹಾಳು ಮಾಡಿಕೊಳ್ಳುವುದಕ್ಕಿಂತ ಒಂದು ಪೈಯ ಬೆಲ್ಲ ತಿಂದು ಹೊಟ್ಟೆ ತುಂಬ ನೀರು ಕುಡಿದು (ಒಮ್ಮೆ ತೇಗಿ ತೋರಿಸಿ) ಹೀಗೆ ಸಂತೋಷದಿಂದ ತೇಗುವುದು ಎಷ್ಟಕ್ಕೊ ಉತ್ತಮ. (ಪುನಃ ನೀಡುವನು).

ವ:—ಅದಿರಲಿ ಸಾಂತಪ್ಪನವರೇ! ಈಗ ಇವರಲ್ಲಿ ಹಣವಿಲ್ಲವಂತೆ. ಕೆಲವು ಸಮಯದ ಪುರ್ಸೊತ್ತು ಕೇಳು ವರು. ಅದಕ್ಕೆ ನೀವೇನೆನ್ನುವಿರಿ?

ಸಾಂ:—ಏನು ವಕೀಲರೇ! ನೀವೂ ಹೀಗೆನ್ನುವುದೆ? ಒಂದು ವೇಳೆ ಕೋರ್ಟಿನಲ್ಲಿ ನೀವೆ ಜಾಮೀನು ನಿಲ್ಲುವು ದಾದರೆ ಆಗ ಬಹುದು.

ವ:—ಮೋಹನರಾಯರೇ! ಸಾಲವನ್ನು ತೀರಿಸಲು ಸಾಧ್ಯವಿಲ್ಲವೆಂದಾದ ಮೇಲೆ ಈ ರೀತಿ ಸಾಲ ಮಾಡಿ ಏತಕ್ಕೆ ಖರ್ಚು ಮಾಡಬೇಕು. ತರುವಾಯ ವಾಪಾಸು ಕೊಡುವುದಿಲ್ಲವೆಂದರಾಗುವುದೆ?

ಮೋ:—ರಾಯರೆ! ನಾನಾ ಹಣದಲ್ಲಿ ಎಳ್ಳಷ್ಟನ್ನೂ ನನ್ನ ಖರ್ಚಿಗಾಗಿ ಉಪಯೋಗಿಸಲಿಲ್ಲ. ಇದು ನಾನು ಪಡಕೊಂಡಿರುವ ಸಾಲವೆ ಅಲ್ಲ.

ವ:—ಮತ್ತೇತಕ್ಕೆ ನೀವು ನೋಟು ಬರೆದು ಕೊಟ್ಟಿರುವಿರಿ.

ಮೋ:—ನಿಮ್ಮ ಕಕ್ಷಿಗಾರರನ್ನೆ ಕೇಳಿರಿ.

ಸಾಂ:—(ಮೋಹನನನ್ನು ಕುರಿತು)ನೀನು ಹಾಗೇ ಹೇಳಿದರೆ ಅದನ್ನು ನಂಬುವ ಬಗೆ ಹೇಗೆ? ನೀವೆ ಒಂದೆ. ಒಂದೊ ಅವನರ್ಧ, ನೀನರ್ಧ— ಇಲ್ಲದಿದ್ದರೆ ಹೆಸರು ಮಾತ್ರ ಅವನಿಗೆ ಹಾಕಿ ನೀನೆ ತಿಂದಿರುವಿಯೋ ಏನೊ, ಯಾರು ಬಲ್ಲ?

ವ:—ಅಂದರೆ ನಿಮ್ಮ ಈಯೊಂದು ಮಾತಿನದೂ ನನಗರ್ಥವೇ ಆಗುವುದಿಲ್ಲವಲ್ಲಾ?

ಸಾಂ:—ಅದೆಲ್ಲ ನಿಮಗರ್ಥವಾಗದು. ಅಂದರೆ ನನಗೊಬ್ಬ ಹುಡುಗನಿದ್ದ. ಅವನಿಗೆ ಇವನು ಮಾವ ಇವನಿಗವನು ಅಕ್ಕನ ಮಗ. ಅಕ್ಕನು ಮಾತ್ರ ಅಂದರೆ ನಮ್ಮಾಕೆ ತೀರಿ ಎಷ್ಟೋ ವರ್ಷಗಳು ಕಳೆ ದಿದ್ದುವು. ಆದಿರಲಿ· ಅವನಿಗೆ ನಾನೇ ಸ್ವತಃ ಅನ ಮಾಡಿ ಹಾಕಿ ಸ್ಕೂಲಿಗೆ ಕಳುಹಿಸುತಿದ್ದೆ. ಎಂಟನೆ ಕ್ಲಾಸ ಪಾಸಾದ. "ಇನ್ನು ಸಾಕು ಮಗೂ ವಿದ್ಯೆ, ಏನಾದರು ಚಿಕ್ಕ ನೌಕರಿ ನೋಡಿಕೊಂಡು ಮನೆಕಡೆ ಇರು" ಅಂದ "ಅದಲ್ಲ, ಹೈಸ್ಕೂಲಿಗೆ ಹೋಗುತ್ತೇನೆ" ಅಂದ ಯಾರು ಕೊಡುವುದು ಸ್ವಾಮಿ ತಿಂಗಳಿಗೆ ಐದೂಕಾಲ ರೂಪಾಯಿ ಸಂಬಳ? ಇಷ್ಟು ಮಾತ್ರವೆ, ಪುಸ್ತಕಗಿಸ್ತಕ ಡ್ರೆಸ್ಸು ಗ್ರಿಸ್ಸು ಇದಕ್ಕೆಲ್ಲಾ ಬೇರೆಯೆ. ನನ್ನಿಂದ ಹೇ

ಕೊಡಲು ಸಾಧ್ಯವಿಲ್ಲವೆಂದೆ. ಅಂದು ನನ್ನ ವೇಳೆ ಸಿಟ್ಟಿನಿಂದ ಹೋದವನ ಪತ್ತೆ ಇಂದಿಗೂ ಇಲ್ಲ. ಮೂರು ನಾಲ್ಕು ದಿವಸ ಕಳೆಯಲು ಇವರ ಮನೆಯಲ್ಲಿರುವನೋ ನೋಡೋಣವೆಂದಿವರ ಮನೆಗೆ ಬಂದೆ. ಇವರಲ್ಲಿಗೆ ಬರಲಿಲ್ಲವೆಂದರು. ಇವರಲ್ಲಿಗೆ ಬರುವಾಗ್ಗೆ ಯಾರೊ ವಸೂಲಿ ಕೊಟ್ಟ ಐನೂರು ರುಪ್ಯಾಗಳನ್ನು ತಂದಿದ್ದೆನು. ಅದನ್ನು ಒಳಗಿಡಲೆಂದು ಇವರ ಕೈಯಲ್ಲಿ ಕೊಟ್ಟಿದ್ದೆ. ಮರು ದಿವಸ ಮನೆಗೆ ವಾಪಾಸು ಹೊರಟು ಹೋದೆ. ಹೋಗುವಾಗ ಹಣವನ್ನು ಕೊಂಡು ಹೋಗಲು ಮರೆತು ಬಿಟ್ಟೆ. ಮರು ದಿವಸ ಅದರ ನೆನಪಾಗಿ ಪುನಃ ಇವರಲ್ಲಿಗೇ ಓಂದೇ ಬಂದು ಹಣ ಕೇಳಿದೆ. ಅದಕ್ಕಿವರು "ನಿಮ್ಮ ಮಗ ವೆಂಕಟು ನಿನ್ನೆ ರಾತ್ರೆ ಇಲ್ಲಿಗೆ ಬಂದಿದ್ದ ಅವನನ್ನು ಸಮಾಧಾನ ಪಡಿಸಿ ಇಂದು ಬೆಳಗ್ಗೆ ನಿಮ್ಮ ಮನೆಗೆ ಕಳುಹಿಸಿದ್ದೇನೆ. ಆ ರುಪ್ಯಾಗಳನ್ನೂ ನಿಮ್ಮ ಕೈಯಲ್ಲಿ ಕೊಡಬೇಕೆಂದು ಅವನ ಕೈಯಲ್ಲಿ ಕೊಟ್ಟಿದ್ದೇನೆ. ಅವನು ಮನೆಗೆ ಬರಲಿಲ್ಲವೆ?" ಅಂದರು. "ಹಾಗಾದರೆ ಅವನು ಬಸ್ಸಿನಲ್ಲಿ ಹೋಗಿರಬಹುದು, ನಾನು ನಡೆದು ಬಂದೆ. ಆದುದರಿಂದಲೆ ಅವನು ನನಗೆ ಸಿಕ್ಕದಿರಬಹುದು" ಎಂದಂದು ಕೊಂಡು ವಾಪಾಸು ಮನೆಗೆ ತೆರಳಿದೆ. ಅಲ್ಲಿ ಹೋಗಿ ನೋಡುವಾಗ ವೆಂಕಟೂ ಇಲ್ಲ, ರೂಪಾಯಿಗಳೂ ಇಲ್ಲ. ಇವರೇನೊ ಅಳಿಯ ಮಾವ ಒಟ್ಟು ಕೂಡಿ ನನಗೆ ಮಂಕು ಬೂದಿ ಹಾಕುತ್ತಾರೆಂದು ನೆನಸಿ ಪುನಃ ಇಲ್ಲಿಗೆ ಓಡಿ ಬಂದೆ. "ಒಂದೊ ನನ್ನ ಹಣ ಕೊಡು, ಇಲ್ಲದಿದ್ದರೆ ನೋಟು ಬರೆದು ಕೊಡು, ಇಲ್ಲದಿದ್ದರೆ ಕ್ರಿಮಿನಲ್ ಮಾಡುತ್ತೇನೆ" ಅಂದೆ. ಬರೆದು ಕೊಟ್ಟೆ, ನಾಯಿಯ ಹಾಗೆ ರೂಪ್ಯಾ 500/-ಕ್ಕೆ ಒಂದು ನೋಟನ್ನು. ಅದು ಈಗ ಬಡ್ಡಿ ಗಿಡ್ಡಿ ಎಲ್ಲಾ ಸೇರಿ ಒಂದು ಸಾವಿರವಾಗಿದೆ. ಹಣವಲ್ಲವೆ ಅದು? ಅದೇ ಕತೆ ಹೇಳುವುದು ಇವನೀಗ "ನಾನು ಉಪಯೋಗಿಸಲಿಲ್ಲ" ವೆಂದು. ಇವನುಪಯೋಗಿಸದಿದ್ದರೆ ಇವನ್ಯಾತಕ್ಕೆ ನೋಟನ್ನು ಬರೆದು ಕೊಟ್ಟ?

ವ:— ಇದೆಲ್ಲ ಸತ್ಯವೆ ಮೋಹನರಾಯರೆ.

ಮೋ:— ಹೇಳಿದ ಕತೆಯೆಲ್ಲವೂ ನಿಜವೆ. ನಾನಾ ಹಣವನ್ನು ಹುಡುಗನ ಕೂಡೆ ಕೊಟ್ಟಿದ್ದೇನೊ ನಿಜವು. ಆದರೆ ಅದಕ್ಕೀಗ ಸಾಕ್ಷಿ ಯಾರು? ಅವನೆಲ್ಲಿರುವನೋ ದೇವರೇ ಬಲ್ಲ. ದೇವರು ಕಂಡಿದ್ದರೂ ಸ್ವತಃ ಸಾಕ್ಷಿ ಹೇಳಲು ಬರಲಾರನು. ಈಗ ಕೊಡಲು ನನ್ನ ಕೈಯಲ್ಲೊಂದು ಕಾಸೂ ಇಲ್ಲ. ನಿಮ್ಮ ಕೆಲಸವನ್ನು ಮುಂದುವರಿಸಿರಿ. ಎಲ್ಲವೂ ಭಗವಂತನ ಇಚ್ಛೆ.

(ಎಂದಂದು ಮೋಹನನು ಹೊರಟು ಹೋಗುವನು. ಪೇದೆಯೂ ಅವನನ್ನನುಸರಿಸುವನು).

ವ:— ನೀವೂ ಹನ್ನೊಂದು ಗಂಟೆಗೆ ಕೋರ್ಟಿನಲ್ಲಿ ಸಿಕ್ಕಿರಿ. ಘಂಟೆ ಹತ್ತು ಹೊಡೆಯಿತು. ನಾನು ಸ್ನಾನಕ್ಕೆ ತೆರಳುವೆನು.

ಸಾಂ:— ಆಗಬಹುದು, ನಮಸ್ಕಾರ, (ಕೈಮುಗಿದು ಹೊರಡುವನು)

ವ:— ಇಕೊಳ್ಳಿ, ಸಾಂತಪ್ಪನವರೆ! ರುಸುಂ ಗಿಸುಂ ಏನಾದರು ಇದ್ದರೆ ಸ್ವಲ್ಪ ಕೊಟ್ಟು ಹೋಗಿ ಬಿಡಿ.

ಸಾಂ:— ಮತ್ತೆ ಸಿಗುತ್ತದಲ್ಲಾ ಹಣ. ಅದರಲ್ಲಿ ವಜಾ ಕೊಡುವೆನು.

ವ:— ಅವನು ಕೋರ್ಟಿನಲ್ಲಿ ನಿಮ್ಮ ಹಣವನ್ನು ಕಟ್ಟಿದರೆ ನೀವು ಹೇಳುವುದೆಲ್ಲ ಸರಿ. ಹಣವನ್ನು ಕಟ್ಟದೆ ಒಂದುವೇಳೆ ಧೈರ್ಯದಿಂದ ಬತ್ತಿಗೆ ಹೋಗುತ್ತೇನೆಂದು ಬಿಟ್ಟರೆ? ಆಗ ಬತ್ತಿ ಕಟ್ಟಲಿಕ್ಕಾದರೂ ಹಣ ಬೇಡವೆ?

ಸಾಂ:— ಏನನ್ನುತ್ತೀರಿ ಸ್ವಾಮೀ! ಒಂದು ಸಾವಿರ ಲೆಕ್ಕಾಚಾರವಾಗುತ್ತದೆ ಅವನಿಂದ ಬರುವುದು. ಇನ್ನು ಬತ್ತಿಗೂ ನಾನೆ ಕೊಡಬೇಕೆ?

ವ:— ಅಲ್ಲ ಸಾಂತಪ್ಪನವರೆ! ನಾವು ಧೈರ್ಯದಿಂದ ಬತ್ತಿಗೆ ಹಣ ಕಟ್ಟದರೆ ಜೈಲಿಗೆ ಹೋಗಲು ಹೆದರಿ ನಿಮ್ಮ ಹಣವನ್ನು ಕೊಟ್ಟೇ ಬಿಡುವನು.

ಸಾಂ:— ಹೆದರದೆ ಜೈಲಿಗೇ ಹೋಗಿ ಬಿಟ್ಟರೆ? ಈ ಹಣವೂ ತಿರುಪತಿ ನಾಮವಲ್ಲವೆ?

ವ:— ನೀವು ಹೆದರಬೇಡಿ, ಸಾಂತಪ್ಪನವರೇ! ಅವನು ಜೈಲಿಗೆ ಎಂದೂ ಹೋಗುವುದಿಲ್ಲ. ಈಗೊಂದು ಐವತ್ತು ರೂಪ್ಯಾ ಕೊಡಿರಿ, ಅವನನ್ನು ಹೆದರಿಸಲಿಕ್ಕೆ ಮಾತ್ರ.

ಸಾಂ:— ಹಾಗಾದರೆ ಒಂದು ಮಾಡಿ ಸ್ವಾಮಿ, ಈಗ ಆ ಹಣವನ್ನು ನಿಮ್ಮ ಕೈಯಿಂದಲೆ ಕಟ್ಟಿ. ಮತ್ತೆ ಅವನಿಂದ ಬಂದ ಹಣದಲ್ಲಿ ನಿಮಗೆ ವಜಾ ಕೊಡುತ್ತೇನೆ.

ವ:— ಅಷ್ಟರ ಆಗತ್ಯವು ನನಗಿರುವುದಿಲ್ಲ. ನಿಮ್ಮ ಹಣ ನಿಮಗೆ ಬೇಕೆಂದಿದ್ದರೆ ಕೊಡಿ. ಇಲ್ಲದಿದ್ದರೆ ಅವನು ತಿನ್ನಲಿ. (ಎಂದು ಸಿಟ್ಟಿನಿಂದ ಹಿಂತಿರುಗುವರು)

ಸಾಂ:—ಸ್ವಾಮಿ, ಸಿಟ್ಟಾಗ ಬೇಡಿರಿ. ನಿಲ್ಲಿರಿ. ಕೊಡುತ್ತೇನೆ (ಹೆಚ್ಚು ಆವರಣಗಳಿಂದ ಕೂಡಿದ ರೂಪಾಯಿಗಳನ್ನು ತೆಗೆದು ವಕೀಲರ ಕೈಯಲ್ಲಿ ಕೊಟ್ಟು) ಈ ಹಣವೆಲ್ಲಾ ವಾಪಾಸು ಬರುತ್ತದಲ್ಲಾ ಸ್ವಾಮಿ.

ವ:—(ಒಂದನ್ನೂ ಕಿವಿಗೆ ಹಾಕಿಕೊಳ್ಳದೆ) ಬೇಗ ಬನ್ನಿ ಕೋರ್ಟಿಗೆ (ಎಂದಂದು ಒಳಗೆ ಹೋಗುವನು)

ಮಾಧವ:—(ತ್ವರೆಯಿಂದ ಪ್ರವೇಶಿಸಿ) ಇದೇನಪ್ಪಯ್ಯಾ! ಇಲ್ಲಿಗೇಕೆ ಬಂದಿರುವಿರಿ?

ಸಾಂ:—(ಸರಿಯಾಗಿ ನೋಡಿ) ಯಾರು, ಮಾಧವನೆ? ಇದುವರೆಗೆಲ್ಲಿದ್ದಿ? ಇಲ್ಲಿಗೆಂದು ಬಂದಿ?

ಮಾ:—ಎಲ್ಲಿಯೊ ಇದ್ದೆನು. ಎಂದೊ ಬಂದೆನು. ನೀವೀಗ ಯಾವ ಕೆಲಸಕ್ಕಾಗಿ ಇಲ್ಲಿಗೆ ಬಂದಿರುವಿರಿ?

ಸಾಂ:—ಸಾಲದ ವಸೂಲಿಗಾಗಿ.

ಮಾ:—ಯಾರಿಂದ?

ಸಾಂ:—ನಿನ್ನ ಮಾವನಿಂದ.

ಮಾ:—ಅವರೆಲ್ಲಿದ್ದಾರೆ.

ಸಾಂ:—ಈಗಲೆ ವಾರಂಟು ಪೇದೆಯನ್ನನುಸರಿಸಿ ಇಲ್ಲಿಂದ ಹೊರಟು ಹೋದನು.

ಮಾ:—ಅಪ್ಪಯ್ಯಾ! ಇದಾವ ಹಣದ ಸಲುವಾಗಿ? ನೀವಲ್ಲಿ ಅಂದು ಮರೆತು ಬಂದಿರುವ ಹಣದ ಸಲವಾಗಿಯೆ?

ಸಾಂ:—ಮರೆತಿರುವ ಹಣವಾದರೇನು? ಅದು ನನಗೆ ವಾಪಾಸು ಸಿಗಬೇಡವೆ?

ಮಾ:—ಅದನ್ನು ಅವರೇ ಉಪಯೋಗಿಸಿದ್ದರೆ? ನೀವನ್ನುವುದು ಸರಿಯೆ? ಅಪ್ಪಯ್ಯಾ! ಅದನ್ನು ವ್ಯಯಿಸಿರುವವನು ನಾನು.

ಸಾಂ:—ಎಲ್ಲವನ್ನೂ ವ್ಯಯಿಸಿ ಬಿಟ್ಟೆಯಾ?

ಮಾ:—ಅಹುದಪ್ಪಯ್ಯಾ! ಅದೆಲ್ಲವನ್ನೂ ನಾನೆ ವ್ಯಯಿಸಿದೆನು.

ಸಾಂ:—(ಸಿಟ್ಟಿನಿಂದ) ಛೀ ಮೂರ್ಖಾ! ನನ್ನನ್ನಪ್ಪಯ್ಯನೆಂದು ಕರೆಯ ಬೇಡ. ಕಲ್ಲಿನಂತೆ ಹಣವನ್ನು ವೆಚ್ಚಮಾಡುವ ನೀನು ನನ್ನ ಮಗನೆ ಅಲ್ಲ. ನನ್ನ ಮೋರೆಯನ್ನು ನೋಡ ಬೇಡ. ನಡೆಯಿಲ್ಲಿಂದ. (ಎಂದು ಬೆನ್ನು ಹಾಕುವನು)

ಮಾ:—ಅಪ್ಪಯ್ಯಾ! ನಾನಾ ಹಣವನ್ನು ವ್ಯರ್ಥವಾಗಿ ವೆಚ್ಚಮಾಡಲಿಲ್ಲ. ಅದರ ವೆಚ್ಚದಿಂದ ಅದರಿಂದಲೂ ನೂರು ಪಾಲು ಹೆಚ್ಚಿನ ಹಣವನ್ನು ಸಂಪಾದಿಸಿರುವೆನು.

ಸಾಂ:—(ಥಟ್ಟನೆ ತಿರುಗಿ ಸಂತೋಷವನ್ನು ಪ್ರಕಟಿಸಿ ಮಗನನ್ನಪ್ಪಿಕೊಂಡು) ಅಹುದೊ ಮಗೂ! ಹಾಗಾದರೆ ನೀನು ನನ್ನ ಮಗನೆ ಅಹುದು. ಅದು ಹೇಗೆ ಮಗೂ ಅಷ್ಟು ಹಣವನ್ನು ಸಂಪಾದಿಸಿದೆ? ಯಾರಿಗಾದರೂ ಧರಣ ಬಡ್ಡಿಯಲ್ಲಿ ಸಾಲ ಕೊಟ್ಟೆಯಾ?

ಮಾ:—ಇಲ್ಲ ಅಪ್ಪಯ್ಯಾ! ನೆಟ್ಟಗೆ ಬೆಂಗಳೂರಿಗೆ ಹೋದೆನು. ಅಲ್ಲೊಂದು ಚಿಕ್ಕ ವ್ಯಾಪಾರವನ್ನು ನಡೆಸಲಾರಂಭಿಸಿದೆನು. ಅದು ದಿನ ದಿನಕ್ಕೆ ವೃದ್ಧಿಯನ್ನೈದಿತು

ಸಾಂ:—ಆಗಲಿ ಚಿಂತೆಯಿಲ್ಲ. ಎಲ್ಲಿ ಮಗೂ ಆ ಹಣ? ಇಲ್ಲಿ ಕೊಡು.

ಮಾ:—ಕೊಡಲೇನದು ಕೈಯಲ್ಲಿರುವುದೆ?

ಸಾಂ:—ಮತ್ತೆಲ್ಲಿದೆ. ಬೇಂಕಿನಲ್ಲಿಟ್ಟಿರುವೆಯಾ? ಅಲ್ಲಿ ಬಡ್ಡಿ ಕಡಮೆಯಲ್ಲವೆ ಮಗೂ!

ಮಾ:—ಇಲ್ಲ, ಒಂದು ಬಂಗ್ಲೆಯನ್ನು ಕಟ್ಟಿಸಿರುವೆನು. ಅದಕ್ಕೆ ಖರ್ಚು ಅರ್ಧ ಲಕ್ಷ.

ಸಾಂ:—ಅಬ್ಬಾ! (ಎಂದಂದು ತಲೆಗೆ ಕೈಯನ್ನಿಟ್ಟು ಹಿಂದಿರುವ ಒರಗು ಬೆಂಚಿನಲ್ಲಿ ದೊಪ್ಪನೆ ಕುಳಿತು) ಅಷ್ಟನ್ನೂ ಒಂದು ಬಂಗ್ಲೆಗಾಗಿ ಖರ್ಚು ಮಾಡಿ ಬಿಟ್ಟೆಯಾ? ನನ್ನಲ್ಲಿ ಒಂದು ಲಕ್ಷದ ವಹಿವಾಟುಗಳಿದ್ದರೂ ನಾನಿನ್ನೂ ಆ ಹರಕು ಮನೆಯಲ್ಲೆ ವಾಸಮಾಡುವುದಿಲ್ಲವೆ?

ಮಾ:—ಏತಕ್ಕಪ್ಪಯ್ಯಾ ಹೀಗೆನ್ನುವಿರಿ. ಸುಖವನ್ನನುಭವಿಸಲಿಕ್ಕಾಗಿಯಲ್ಲವೆ ಹಣವು? ಸುಖಿಸದವನಿಗೆ ಹಣವೇಕೆ?

ಸಾಂ:—ಛೀ, ಮುರುಳಾ! ಹುಚ್ಚನಂತೆ ಬೊಗಳಬೇಡ. ದಿನ ದಿನಕ್ಕೆ ಹೆಚ್ಚುತ್ತಿರುವ ಹಣದ ರಾಶಿಯನ್ನು ಕಣ್ಣಿನಿಂದ ನೋಡುತ್ತಿರುವುದರಿಂದಾಗುವಷ್ಟು ಸುಖವು ಅದನ್ನು ವೆಚ್ಚಮಾಡುವುದರಿಂದಾಗುವುದೆ? ನೀನು ನನ್ನ ಮಗನೆ ಅಲ್ಲ. ನಡೆ ಇಲ್ಲಿಂದ.

ಮಾ:—ಅದಂತಿರಲಿ. ಈಗ ಮಾವಯ್ಯನವರನ್ನು ಬಿಡಬೇಕೆಂದು ನಿಮ್ಮೊಡನೆ ಕೇಳಿಕೊಳ್ಳಲು ಇಲ್ಲಿಗೆ ಬಂದಿರುವೆನು.

ಸಾಂ:—ಹಣಕೊಟ್ಟರೆ ಬಿಡುವೆನು.

ಮಾ:—ಹಾಗಿದ್ದರೆ ನಾನು ಕೇಳಿಕೊಳ್ಳಬೇಕಾದ ಆವಶ್ಯಕತೆಯೇನಿದೆ? ಆ ಹಣವನ್ನು ವ್ಯಯಿಸಿರುವವನು ನಾನು. ಮಾವನಲ್ಲ.

ಸಾಂ:—ನೀನೇ ಕೊಡು.

(೪೪ನೇ ಪುಟಕ್ಕೆ ಮುಂದರಿದಿದೆ.)

ವೋಟಿಗೂ ಏಟಿಗೂ ಹತ್ತಿರದ ಸಂಬಂಧವಿರಬೇಕು. ಕಳೆದ ಎಸೆಂಬ್ಲಿ ಚುನಾವಣೆಗಳಲ್ಲಿ ಸಂಯುಕ್ತ ಪ್ರಾಂತ್ಯದ ಜಮೀನ್ದಾರರು ಏಟು ಕೊಟ್ಟು ವೋಟು ಪಡೆಯುವ ಆಲೋಚನೆ ಮಾಡಿದ್ದರು ಅವರಿಂದ ಏಟು ಕೊಡಲೂ ಆಗಲಿಲ್ಲ; ವೋಟು ಪಡೆಯಲೂ ಆಗಲಿಲ್ಲ!



೦೦ ೦೦

ಆದರೆ ವೋಟು ಕೊಟ್ಟು ಏಟು ಪಡೆದ ಬಡವರು ಅಲ್ಲಿ ಬಹುಮಂದಿ ಇದ್ದಾರೆ.

೦೦ ೦೦

ದುಮರೋನಿನ ಮಹಾರಾಜರ ಚುನಾವಣಾಕ್ಷೇತ್ರಕ್ಕೆ, ಚುನಾವಣೆಯ ಗೊಂದಲದ ಸಮಯ ಪಂಡಿತ ಜವಾಹಿರಲಾಲರು ಹೋಗಿದ್ದರು. ಮಹಾರಾಜರ ಕ್ಷೇತ್ರಕ್ಕೆ ಮಹಾರಾಜದ್ರೋಹಿಗಳು ಹೋಗುವದೆಂದರೆ!

೦೦ ೦೦

ಪಂಡಿತರಿಗೆ ಏಟು ಕೊಡಿಸುವ ಬುದ್ಧಿ ಆ ಮಹಾರಾಜರಿಗೆ ಹುಟ್ಟಿತು. ಮಹಾರಾಜರ ಪರಿವಾರದವರು ಕೆಲವರು ಅದಕ್ಕೂ ವೋಟು ಕೊಡಲಿಲ್ಲ!

೦೦ ೦೦

ಅಲ್ಲಿಯ ಬೋಜ್‌ಪುರ ಎಂಬಲ್ಲಿ ಕಿಸಾನಸಭೆಯೊಂದು ಸೇರುವದಿತ್ತು. ರಾಜರ ಪಾದಧೂಳಿಯಲ್ಲಿ ಹೊರಳಾಡುವದನ್ನು ಬಿಟ್ಟು ಸ್ವಚ್ಛ ಮೈದಾನಿಗೆ ಹೋಗಿ ಸಭೆ ಸೇರುವದು ಶುದ್ಧಾಚಾರವೆಂದರೆ!

೦೦ ೦೦

ದುಮರೋನಿನ ಮಹಾರಾಜರ ಕಡೆಯ ಜನ, ತಹಶೀಲ್ದಾರರಿದ್ದಲ್ಲಿ ಬಂತು. 'ಆ ಸಭೆಯನ್ನು ಬಲಾತ್ಕಾರದಿಂದ ಚದರಿಸಬೇಕು; ಸ್ವಾಮಿ ಸಹಜಾನಂದ ಮೊದಲಾದ ಮೂವರು ಪ್ರಮುಖ ಕೆಲಸಗಾರರಿಗೆ ಸರೀ ಹೊಡೆಯಬೇಕು' ಎಂಬ ಹುಕುಂ ಜತೆಯಲ್ಲಿಯೇ ಬಂತು.

೦೦ ೦೦

ಆ ತಹಶೀಲ್ದಾರರೆಂತಹ ಹೇಡಿಗಳೋ! ಅವರು ಅಂದು ಜವಾಹರಲಾಲರಿಗೆ ಹೊಡೆಯುವದಕ್ಕೂ ಕೇಳಲಿಲ್ಲ; ಈಗ ಇವರಿಗೆ ತಾಡಿಸುವದಕ್ಕೂ ಒಪ್ಪಲಿಲ್ಲ. ಪೆಟ್ಟು ತಿನ್ನುವದಕ್ಕೆ ಹೆದರಬೇಕು——ಕೊಡುವದಕ್ಕೂ ಹೆದರಿಕೆಯೆಂದರೆ? ಅದೂ ಕಾಂಗ್ರೆಸಿನವರಿಗೆ!

೦೦ ೦೦

ತಹಶೀಲ್ದಾರರು ಇದನ್ನು ನಮೂದಿಸಿ ಸರ್ಕಲ್ ಆಫೀಸರರಿಗೆ ಬರೆದರು. 'ಇದು ಅನ್ಯಾಯ ಮತ್ತು ಕಾಯಿದೇ ವಿರುದ್ಧ. ಅಂದು ಜವಾಹಿರಲಾಲರಿಗೆ ಹೊಡೆಸಲೊಪ್ಪದುದರಿಂದ ಮಹಾರಾಜರ ಜನರಲ್ ಏಜಂಟರೂ ಕೊತ್ವಾಲರೂ ನನ್ನ ಮೇಲೆ ಉರಿ ಕಾರುತ್ತಿದ್ದಾರೆ' ಎಂದಿತ್ತು ಪತ್ರದಲ್ಲಿ.

೦೦ ೦೦

ಕಾಯಿದೆಯಿಂದ ಮನುಷ್ಯರು ಹುಟ್ಟಲಿಲ್ಲ; ಮನುಷ್ಯರಿಂದ ಕಾಯಿದೆ ಹುಟ್ಟಿತು. ಮೇಲಿನವರ ಆಜ್ಞೆಯಾದೊಡನೆ ಹೊಡೆಯುವ ಕಾಯಿದೆಯನ್ನು ಕೂಡಲೇ ಜಾರಿ ಮಾಡಲಾರದ ಈ ತಹಶೀಲ್ದಾರರಂತಹ ಮನುಷ್ಯರಯ್ಯ?

೦೦ ೦೦

ಅವರ ಈ ಪತ್ರವು ಮೊನ್ನೆ ಸಂದರ್ಭ ವಶಾತ್ ಕೋರ್ಟಿನ ಮುಂದೆ ಬಂತು. ಈ ಎಲ್ಲಾ ಸಂಗತಿ ಬೆಳಕಿಗೆ ಬಿತ್ತು. ಗುಟ್ಟು ಹೊರಬಿದ್ದರೂ ಪೆಟ್ಟು ಬೀಳಲಿಲ್ಲ!-ಪೆಟ್ಟೆಂದರೆ ಗುಟ್ಟಿಗೂ ಗುಟ್ಟಾಗಿರುವ ಅಸಾಧ್ಯ ವಿಷಯವೆ?

೦೦ ೦೦

ಸಂಯುಕ್ತ ಪ್ರಾಂತ್ಯದ ಜಮೀನ್ದಾರರ ಪರಿಷತ್ತೊಂದು ಕೆಲಕಾಲದ ಹಿಂದೆ ಕೂಡಿತ್ತು. ಅಲ್ಲಿ ಭಾಷಣ ಮಾಡುತ್ತಾ ಒಬ್ಬ ಜಮೀನ್ದಾರರು 'ಮುಖ್ಯಮಂತ್ರಿ ಪಂತರಿಗೆ ಎದೆಯಿದೆ; ನನ್ನಲ್ಲಿ ಖಡ್ಗವಿದೆ' ಎಂದು ಖಡ್ಗ ಹಿರಿದರಂತೆ!

೦೦ ೦೦

ಪಂಡಿತ ಪಂತರಿದ್ದುದು ಸರಕಾರೀಗೃಹದಲ್ಲಿ-ಈ ಪರಿಷತ್ತು ಅಲ್ಲಿಂದ ನೂರಾರು ಮೈಲು ದೂರದಲ್ಲಿ! ಇಲ್ಲಿಂದಲ್ಲಿಗೆ ಗುರಿಯಿಟ್ಟು ಜಮೀನ್ದಾರರೊಂದು ಹೊಸದಾಖಲೆ ಮಾಡಿದ್ದಾರೆ.

೦೦ ೦೦

ಸೈಮನ್ ಕಮಿಶನ್ ಬಂದಾಗ ಬಿದ್ದ ಲಾಠಿಪೆಟ್ಟಿನಿಂದಾಗಿ ಪಂಡಿತ ಪಂತರ ಬೆನ್ನು ಈಗಲೂ ಬಗ್ಗಿಯೇ ಇದೆ. ಹೀಗಾಗಿ ಪಂತರ ಎದೆ ಮುಂದೆ ಬಂದಿರಬೇಕೆಂಬುದು ನಿಜ.

೦೦ ೦೦

ಎಷ್ಟು ಮುಂದೆ ಬಂದರೂ ನೂರಾರು ಮೈಲು ದೂರದ ಆ ಪರಿಷತ್ತಿನ ವರೆಗೆ ಬಂದಿರಲಿಕ್ಕಿಲ್ಲ.

೦೦ ೦೦

ತುಕಾರಾಮ ಸಾಧು ಜೀವ ಸಮೇತ ಸ್ವರ್ಗಕ್ಕೆ ಹೋಗಿದ್ದನೆಂದು ಭಕ್ತರು ಹೇಳುತ್ತಾರೆ. ಮಿಕ್ಕವರಾರೂ ಒದ್ದಾಡದೆ ಪ್ರಾಣ ಬಿಟ್ಟದ್ದಿಲ್ಲ. ಜಮೀನ್ದಾರರಾದರೇನಾಯಿತು?

—ದೂಮ.

# ವಾರ್ತಾ ಪತ್ರಿಕೆಯೆಂದರೇನು?

# ಅಭೂತಪೂರ್ವವಾದ ವ್ಯವಹರಣೆ

## (ಮಿ| ಜಸ್ಟೀಸ್ ರಮಾನಾ ಬಾರಿಯವರ ಮುಂದೆ)

**ಬೇಸಿಗೆ ಕಾಲದ ಕೋರ್ಟಿನಲ್ಲಿ ಕುಳಿತುಕೊಂಡು ಅವರ ಪ್ರಭು ಹಡಗ (His Lordship) ರವರು ಈ ದಿನ "ನೃತ್ಯವಾಣಿ" ಎಂಬ ವ್ಯವಹರಣೆಯಲ್ಲಿ ಕೆಳಗಿನಂತೆ ಜಜ್‌ಮೆಂಟ್ (ತೀರ್ಪು) ಕೊಟ್ಟರು: —**

"ಈ ಕೇಸು ಹಿಂದುಸ್ಥಾನದ ವ್ಯವಹರಣಾ ಚರಿತ್ರೆಯಲ್ಲೇ ಹೊಸತಾದುದು. ಪೋಸ್ಟ್ ಮಾಸ್ಟರ್ ಜನರಲ್‌ರವರು "ನೃತ್ಯವಾಣಿ" ಎಂಬ ಮಾಸ ಪತ್ರಿಕೆಯನ್ನು ರಿಜಿಸ್ಟರ್ ಮಾಡದಿರಲು ಕಾರಣವೇನು ಎಂಬುದೇ ಇದರ ಸಾರವಾಗಿದೆ.

"ವಾರ್ತಾ ಪತ್ರಿಕೆಯ ಸ್ವಾತಂತ್ರ್ಯದ ಈ ಕಾಲದಲ್ಲಿ ಕೂಡಾ ವೃತ್ತ ಪತ್ರಿಕೆಗಳ ಮಾಲಕರು ೧೮೬೭ರ ಕಾಯಿದೆಗನುಸಾರವಾಗಿ ತಮ್ಮ ಪತ್ರಿಕೆಗಳನ್ನು ರಿಜಿಸ್ಟರ್ ಮಾಡುವ ಆವಶ್ಯಕತೆಯಿರುವುದು ಶೋಚನೀಯವಾಗಿದೆ. ಜನರಲ್ ಪೋಸ್ಟ್ ಆಫೀಸಿನಲ್ಲಿ ರಿಜಿಸ್ಟರ್ ಮಾಡಲ್ಪಟ್ಟ ವಾರ್ತಾ ಪತ್ರಿಕೆಗಳಿಗೆ ಕಡಿಮೆ ಚೀಟನ್ನು ಅಂಟಿಸಿ ಎಲ್ಲೆಡೆಗಳಿಗೂ ಕಳುಹಿಸುವ ಒಂದು ಹಕ್ಕು ದೊರಕುತ್ತದೆ. ಆದರೆ ಈ ವಾರ್ತಾ ಪತ್ರಿಕೆಗಳಲ್ಲಿರುವ ಅನಾಹುತದ ಸುದ್ದಿಗಳನ್ನು ಹುಡುಗರು ಎಲ್ಲಾ ಪೇಟೆಗಳ ಮಧ್ಯದಲ್ಲಿ ಕೂಗಿ ಕರೆದು ಮಾರುವುದನ್ನು ಸರಕಾರವು ನಿಷೇಧಿಸದಿರುವುದು ಆಶ್ಚರ್ಯದ ಒಂದು ಸಂಗತಿಯಾಗಿದೆ.

"ಹಲವು ವರುಷಗಳಿಂದ "ನೃತ್ಯವಾಣಿ"ಯು ಪೋಸ್ಟಲ್ ಡಿಪಾರ್ಟ್‌ಮೆಂಟಿನವರಿಂದ ರಿಜಿಸ್ಟರ್ ಮಾಡಲ್ಪಟ್ಟರೂ ಈ ವರುಷ ಮಾತ್ರ ಅದಕ್ಕೆ ಆ ಸವಲತ್ತನ್ನು ಕೊಡಲಿಲ್ಲ. "ನೃತ್ಯವಾಣಿ" ಯೊಡನೆ ಈಗ "ನಗ್ನ ಸಾಮ್ರಾಜ್ಯ"ವು ಸಮಾವಿಷ್ಟವಾಗಿರುವುದರಿಂದ ಅದನ್ನು ಅಧಿಕಾರಿಗಳು ವೃತ್ತಪತ್ರಿಕೆಯೆಂದು ಪರಿಗಣಿಸುವುದಿಲ್ಲ.

"ಅದರ ಮಾಲಕರು ಸಿಟ್ಟಿನಿಂದಲೂ ಆಶ್ಚರ್ಯದಿಂದಲೂ ಹೀಗೆ ಹೇಳುತ್ತಿದ್ದಾರೆ. (೧) ಅವರ ಪ್ರಕಟನೆಯು ವೃತ್ತಪತ್ರಿಕೆ. (೨) ಅದು ವೃತ್ತಪತ್ರಿಕೆ ಹೌದೋ ಅಲ್ಲವೊ ಎಂಬುದನ್ನು ನೋಡುವ ಹಕ್ಕು ಅವರಿಗಿಲ್ಲ. ಕೇಳಿದಾಗ ರಿಜಿಸ್ಟರ್ ಮಾಡುವುದು ಮಾತ್ರ ಅವರ ಕೆಲಸವಾಗಿದೆ.

"ಎರಡನೆಯ ವಿಚಾರವನ್ನು ನಾವೀಗ ಯೋಚಿಸಬೇಕಾಗಿಲ್ಲ, "ನೃತ್ಯವಾಣಿ" ಯನ್ನು ರಿಜಿಸ್ಟರ್ ಮಾಡಿರುವುದರಿಂದ "ನಗ್ನ ಸಾಮ್ರಾಜ್ಯ"ವೂ ಅದೇ ಸವಲತ್ತನ್ನು ಪಡೆದಂತಾಗುವುದೆಂದು ನಾನು ಭಾವಿಸುವುದಿಲ್ಲ. ಉದಾಹರಣೆಗಾಗಿ ಯಾರಾದರೂ ಒಂದು ಪತ್ರಿಕೆಯನ್ನು ಹೊರಡಿಸಿ, ಅದರ ಒಂದು ಭಾಗದಲ್ಲಿ ಧಾರ್ಮಿಕ ವಚನಗಳನ್ನು ತುಂಬಿ ಇನ್ನೊಂದು ವಿಭಾಗದಲ್ಲಿ ನಾಚಿಕೆಯಿಲ್ಲದೆ ನಗ್ನವಾಗಿ ನಿಂತಿರುವ ಸ್ತ್ರೀಯರ ಭಾವಚಿತ್ರಗಳನ್ನು ಪ್ರಕಟಿಸಿದರೆ ಎರಡೂ ನ್ಯಾಯ ಬಾಹಿರ ಪ್ರಕಟನೆಗಳಾಗುತ್ತವೆ. ಮಾಲಕರು ರಿಜಿಸ್ಟರ್ ಮಾಡಬೇಕೆಂದು ಹೇಳಿರುವುದರಿಂದ ಮಾತ್ರ ರಿಜಿಸ್ಟರ್ ಮಾಡಬೇಕೆಂಬ ಆವಶ್ಯಕತೆಯಿಲ್ಲ. ವೃತ್ತ ಪತ್ರಿಕೆಯೆಂದರೇನೆಂದು ಸ್ಪಷ್ಟಗೊಳಿಸುವ ಹಕ್ಕು ಅಧಿಕಾರಿಗಳಿಗಿದೆ.

"ಈಗ ನಾನು ಎರಡನೆ ವಿಚಾರದ ಕುರಿತು ಹೇಳಬೇಕಾಗಿದೆ. "ನೃತ್ಯವಾಣಿ" ಯೊಡನೆ ಸಮಾವಿಷ್ಟವಾಗಿರುವ "ನಗ್ನ ಸಾಮ್ರಾಜ್ಯ" ಪತ್ರಿಕೆಯನ್ನು ಕೋರ್ಟು ವೃತ್ತ ಪತ್ರಿಕೆಯೆಂದು ಕರೆಯಬೇಕೇ ಬೇಡವೆ?

'ವೃತ್ತ' ಅಥವಾ 'ವೃತ್ತಾಂತ' ವೆಂಬುದು ಬಹು ವಿಶಾಲವೂ ನಾನಾರ್ಥಗಳುಳ್ಳದ್ದೂ ಆಗಿರುವ ಒಂದು ಶಬ್ದವಾಗಿದೆ. ಹೊಸತಾಗಿ ಸಾಹಿತ್ಯ ಪರಿಷತ್ತಿನವರು ಹೊರಡಿಸಿದ "ಶಬ್ದ ಸಾಮ್ರಾಜ್ಯ"ದಲ್ಲಿ ವೃತ್ತದ ಅರ್ಥವು ಹೀಗೆ ಬರೆಯಲ್ಪಟ್ಟಿದೆ. 'ವೃತ್ತ: ಇತ್ತೀಚೆಗೆ ನಡೆದ ಹೊಸತಾಗಿ ಬಂದೊಂದು ವಿಚಾರ. ಹೊಸ ಘಟನೆಯ ವರದಿ.' — ಈ ಅರ್ಥಕ್ಕನುಸಾರವಾಗಿ ಯುದ್ಧಾರಂಭದ ವಾರ್ತೆಯಿಂದ ಮೊದಲ್ಗೊಂಡು ವಿವಾಹ ವಿಚ್ಛೇದನ ಸುದ್ದಿಯೂ ವೃತ್ತವಾಗುತ್ತದೆ. ಇದು ರಾಷ್ಟ್ರೀಯ, ಸ್ಥಳೀಯ, ಅಥವಾ ಇನ್ನಾವ ತರ[illegible] ಸುದ್ದಿಯೂ ಆಗಿರಬಹುದು. ತೆಂಗಿ[illegible] ಕಾಯಿ ಹೆರೆಯುವ ಹೊಸ ಯಂತ್ರ[illegible] ನಿರ್ಮಾಣದ ಸುದ್ದಿಯು "ಪಾಕವಾಣಿ" ಯ ವಾಚಕರಿಗೆ ನಿಜವಾದ ಉಪಯುಕ್ತ ವಾರ್ತೆಯಾಗಿದೆ. ಆದರೆ "ಪಾಕವಾಣಿ" ಯ ಪ್ರತಿ ಸಂಚಿಕೆಯಲ್ಲಿ ತೆಂಗಿನ ಕಾಯಿ ಹೆರೆಯುವ ಯಂತ್ರದ ಭಾವಚಿತ್ರ ಅಥವಾ ಅಡಿಗೆ ಭಟ್ಟರ ಚಿತ್ರಗಳು ಬಂದ[illegible] ಅದು ವಾರ್ತಾ ಪತ್ರಿಕೆಯಾಗುವುದೆ ಅಥವಾ ಒಂದು ಭಾವಚಿತ್ರ ಸಂಗ್ರ[illegible]ವಾಗುವುದೇ?

"ಅಡಿಗೆ ಭಟ್ಟರಿಗೆ ಅನ್ವಯಿಸು[illegible] ವಿಚಾರವು "ನಗ್ನ ಸಾಮ್ರಾಜ್ಯ"ದ ವಾ[illegible]ಕರಿಗೂ ಅನ್ವಯಿಸುತ್ತದೆ. ಆದರೆ [illegible] ಕೋರ್ಟು ಮೊದಲೇ ಒಂದು ವಿಚಾರವನು ಸ್ಪಷ್ಟಗೊಳಿಸಲಿಚ್ಛಿಸುತ್ತದೆ, ಸುಂದರಿ[illegible]ರಾದ ತರುಣಿಯರ ವಿವಿಧ ಭಾವಭಂಗಿಗ[illegible] ಭಾವಚಿತ್ರಗಳನ್ನು ನೋಡಲು ಈ ಕೋರ್ಟಿಗೆ ಆಕ್ಷೇಪವಿಲ್ಲ ಅಥವಾ ಎಳೆ ತರ[illegible]ಣಿಯರು ಸ್ನಾನಮಾಡುವ ದೃಶ್ಯಗ[illegible] ಸಾರ್ವಜನಿಕ ನೀತಿಯನ್ನು ಕೆಡಿಸುತ್ತದೆಂಬ ಆಕ್ಷೇಪಣೆಗೆ ಈ ಕೋರ್ಟು ಸ್ವೀಕ[illegible]

ವುದಿಲ್ಲ. ಇದಕ್ಕೆ ತೀರಾ ವಿರುದ್ಧವಾಗಿ ರುಣಿಯರ ಈ ಭಾವಚಿತ್ರಗಳ ಪ್ರದರ್ಶನ ಂದಾಗಿ ಪುರುಷ ಸಮುದಾಯದ ಲಕ್ಷ್ಯ ವು ಸ್ತ್ರೀಸೌಂದರ್ಯದೆಡೆಯಿಂದ ದೂರ ವಾಗಿ ಆಟಕೂಟ ವಿನೋದಗಳೆಡೆಗೆ ಹರಿ ರುವುದು ಈ ಕೋರ್ಟಿನ ಅಭಿ ಪ್ರಾಯದಲ್ಲಿ ಶೋಚನೀಯವಾಗಿದೆ. ಈ ವ್ಯತ್ಯಾಸದಿಂದಾಗಿ ಮಾನವ ಜಾತಿಯ ವೃದ್ಧಿಗೊಂದು ತಡೆಯುಂಟಾಗಿರು ವುದಲ್ಲದೆ, ಇಂತಹ ಪರಿಸ್ಥಿತಿಯು ಇಟಲಿ ಯಲ್ಲಿ ತಲೆದೋರಿದ್ದರೆ ಸರ್ವಾಧಿಕಾರಿಗಳ ಕುದುರೆಯು ನಾಗಾಲೋಟದಿಂದ ಈ ಪದ್ಧ ಯ ಎದೆಯ ಮೇಲೆ ನಡೆದು ಬಿಡುತ್ತಿ ತ್ತು. ಈ ಭಾವಚಿತ್ರಗಳಿಂದ ಸಾಮಾಜಿಕ ಪ್ರಯೋಜನವಿದೆ. ಬೇಸರದಿಂದ ತುಂಬಿ ಲೆಯನ್ನು ಬಗ್ಗಿಸುತ್ತಿರುವ ಈ ಅನಿಷ್ಟ ಾಲದಲ್ಲಿ ನಗುಮುಖದ ಲಲನೆಯರನ್ನು ಾಗದದ ಮೇಲಾದರೂ ಕಂಡು ಸಂತೋಷ ಡುವುದರಿಂದ ಆರೋಗ್ಯಕ್ಕೆ ತುಂಬಾ ಪ್ರಯೋಜನಕಾರಿಯಾಗಿದೆ. ಅವರು ಪುಷ್ಪ ತಿಯ ಬಳಿಯಲ್ಲಿ ತಮ್ಮ ನಡುವನ್ನು ಳುಕಿಸಿ ಅದನ್ನು ಅನುಕರಿಸುತ್ತಿರಲಿ, ಥವಾ ನೀರಿನಿಂದುದಯಿಸುತ್ತಿರುವ ನಾಗ ನ್ನೆಯರಂತಿರಲಿ, ಇಲ್ಲವೆ ಸೃಷ್ಟಿಕರ್ತನ ಲಾ ಚಾತುರ್ಯವನ್ನು ತಮ್ಮ ದೇಹದ ೌಂದರ್ಯಗಳ ಮೂಲಕ ಪ್ರದರ್ಶಿಸಲಿ- ವೆಲ್ಲಾ ದೃಶ್ಯಗಳು ಮನುಷ್ಯ ದೃಷ್ಟಿಗೆ ಹಳ ಪ್ರಯೋಜನಕಾರಿಯಾಗಿರುವುದಲ್ಲ ! ಕುಗ್ಗಿದ ಹೃದಯವನ್ನು ಚೇತರಿಸಿ ಗ್ಗಿಸುವ ಶಕ್ತಿಯು ಈ ದೃಶ್ಯಗಳಿಗಿವೆ ುಂದು ಈ ಕೋರ್ಟು ಅಭಿಪ್ರಾಯ ಡುತ್ತದೆ.

"ಈಗ ನಾನು ಹೇಳುತ್ತಿರುವುದು ನೃತ್ಯ ವಾಣಿ (ಇದರೊಡನೆ ನಗ್ನ ಸಾಮ್ರಾಜ್ಯ ಸಮಾವಿಷ್ಟವಾಗಿದೆ)ಯ ಕುರಿತು. ಬೇಸಿಗೆ ಕಾಲದಲ್ಲಿ ಇದರ ಹೆಚ್ಚಿನ ಪುಟಗಳಲ್ಲಿ ಜಗತ್ತಿನ ವಿವಿಧ ರಾಷ್ಟ್ರಗಳಲ್ಲಾಗುವ ವ್ಯಭಿಚಾರ ಮತ್ತು ಸಮುದ್ರ ಸ್ನಾನದ ದೃಶ್ಯಗಳೇ ಹೆಚ್ಚಾಗಿರುತ್ತವೆ. ಕೇವಲ ತರುಣಿಯರಿದ್ದರೆ ಆಕ್ಷೇಪವಿಲ್ಲ. ಆದರೆ ಅವರು ಜವಳಿ ಅಂಗಡಿಗಳಿಲ್ಲದ ಊರಿನಲ್ಲಿದ್ದವರಂತೆ ನಗ್ನವಾಗಿರುವುದೂ, ಹೆಸರಿಗೆ ಮಾತ್ರ ಬಟ್ಟೆಗಳನ್ನು ಧರಿಸುವುದೂ ನೋಡಲು ಕೆಟ್ಟದಲ್ಲದಿದ್ದರೂ ಸಾರ್ವಜನಿಕರು ಇದಕ್ಕೆ ತಮ್ಮ ಸಮ್ಮತಿಯನ್ನು ಕೊಡಬೇಕಾಗಿದೆ. ಆದರೆ ಇವುಗಳನ್ನು 'ವಾರ್ತೆ' ಯೆಂದು ಕರೆಯಲಾಗುವುದಿಲ್ಲವೆಂದು ಈ ಕೋರ್ಟಿನ ಅಭಿಪ್ರಾಯವಾಗಿದೆ.

"ನಾವು ಈ ಪತ್ರಿಕೆಯ ಕುರಿತು ಯೋಚಿಸುವುದು ಅತ್ಯವಶ್ಯವಾಗಿದೆ. ಸಾಕ್ಷಿ ನಂಬ್ರ ೮ ಹೇಳಿದಂತೆ ಅದರಲ್ಲಿ ಶಿರೋನಾಮೆಗಳು ಅಧಿಕವಾಗಿರುವುದಲ್ಲದೆ ಉಳಿದುದೆಲ್ಲಾ ರೋಮಾಂಚನಗೊಳಿಸುವ ವಾರ್ತೆಗಳಂತೆ. ಒಬ್ಬ ಸ್ತ್ರೀಯು ಗಂಡನನ್ನು ಬಿಟ್ಟಳೆನ್ನುವುದಕ್ಕೆ ಒಂದು ಇಂಚು ಉದ್ದದ ಶಿರೋನಾಮೆಯ ಅಕ್ಷರಗಳನ್ನು ಉಪಯೋಗಿಸುವುದರ ಅರ್ಥವಾದರೂ ಏನು? ಆ ಅಕ್ಷರಗಳ ಕೆಳಗೆ ೭೫ ವರುಷಗಳಿಗಿಂತ ಮಿಕ್ಕಿದವರು ಓದಲಾಗದಷ್ಟು ಚಿಕ್ಕ ಅಕ್ಷರಗಳನ್ನು ಜೋಡಿಸುವ ಹುರುಳೇನು? ಇದನ್ನು ನೋಡುವಾಗ ಅದರ ಸಂಪಾದಕರಿಗೆ ಯೋಗ್ಯಾಯೋಗ್ಯತೆಯ ಅರಿವೇ ಇಲ್ಲವೆಂದು ಸ್ಪಷ್ಟವಾಗುತ್ತದೆ.

"ಹೇಗಿದ್ದರೂ ಈ ಕೋರ್ಟಿನ ದೃಷ್ಟಿಯಲ್ಲಿ ಅದರಲ್ಲಿ ಪ್ರಕಟವಾದುವುಗಳು ವಾರ್ತೆಗಳೆಂದು ಕಾಣಿಸುವುದಿಲ್ಲ. ಪ್ರತಿಯೊಂದು ಪತ್ರಿಕೆಯು ವಿಧಾಯಕ ಸಭೆಗಳ ಚರ್ಚೆ, ಕಲೆ, ಸಂಸ್ಕೃತಿ, ತತ್ವ ಮೊದಲಾದುವುಗಳ ವಿವರವನ್ನು ಬರೆಯಬೇಕೆಂದು ಯಾರೂ ಹೇಳುವುದಿಲ್ಲ. ಆದರೆ ಮಾನವ ಸಮಾಜದ ಕೊಳಕು ಪದ್ಧತಿಗಳು, ವ್ಯಭಿಚಾರ, ಮೊದಲಾದುಗಳನ್ನೇ ಕೊಡಬೇಕೆಂದೂ ಹೇಳಿದವರಿಲ್ಲ. ಅದರೆ ಯಾವುದಾದರೊಂದು ವಾರ್ತೆಯನ್ನು ಕೊಡುವುದು ರಿಜಿಸ್ಟರ್ ಮಾಡಲ್ಪಡಬೇಕಾದ ಪತ್ರಿಕೆಯ ಕರ್ತವ್ಯವಾಗಿದೆ.

"ಸಾಕ್ಷಿ ನಂಬ್ರ ೯ ಜೀನಸಿನ ಅಂಗಡಿಯಲ್ಲೊಬ್ಬ ಮಾಲಕರು.] ಈ ಪತ್ರಿಕೆಯ ಕುರಿತು ಅವರು ತಮ್ಮ ಅಭಿಪ್ರಾಯವನ್ನು ಕೊಡುತ್ತಾ ಅದರಲ್ಲಿ ಕೆಲವು ಒಳ್ಳೇ ಲೇಖನಗಳೂ, ಸ್ವಾರಸ್ಯದ ಚಿತ್ರಗಳೂ ಇವೆಯಲ್ಲದೆ ವಾರ್ತೆಯಿಲ್ಲವೆಂದರು. ಸಾಮಾನು ಕಟ್ಟಿಕೊಡುವ ಅದರ ಪುಟಗಳಲ್ಲಿರಬಹುದಾದ ಚಿತ್ರಗಳನ್ನು ಕಂಡು ಹುಡುಗರು ಸಂತೋಷ ಪಡುವುದಿದೆಯೆಂದು ಅವರು ಹೇಳುತ್ತಾರೆ.

"ಈ ಸಂದರ್ಭದಲ್ಲಿ ಪತ್ರಿಕಾ ಸ್ವಾತಂತ್ರ್ಯವನ್ನು ಈ ಕೋರ್ಟು ಅಪಹರಿಸುವುದಿಲ್ಲ. ಆದರೆ "ನೃತ್ಯವಾಣಿ"ಯೊಡನೆ ಸಮಾವಿಷ್ಟವಾಗಿರುವ "ನಗ್ನ ಸಾಮ್ರಾಜ್ಯ"ಕ್ಕೆ ರಿಜಿಸ್ಟರ್ ನಂಬರನ್ನು ಪೋಸ್ಟಲ್ ಇಲಾಖೆಯವರು ಕೊಡದಿರುವುದು ನ್ಯಾಯ ಸಮ್ಮತವೆಂದು ಈ ಕೋರ್ಟು ಅಭಿಪ್ರಾಯ ಪಡುತ್ತದೆ.

# ಕರುಣೆಯಿಲ್ಲದ......
# ಪತ್ರಿಕೋದ್ಯಮಿಗಳು!

ಪ್ರತಿಯೊಂದು ವಿಚಾರಕ್ಕೂ ಒಂದು ಮಿತಿಯಿದೆ. ಜ್ಞಾನವು ಉತ್ತಮವೆಂದು ಸಿಕ್ಕಿದ್ದನ್ನೆಲ್ಲಾ ನನ್ನ ಚಿಕ್ಕ ತಲೆ ಬುರುಡೆಯೊಳಗೆ ತುಂಬಲು ನಾನು ಸಿದ್ಧನಾಗಿಲ್ಲ. ಔಷಧಿಯು ಉತ್ತಮವೆಂದು ಮಿತಿಯಿಲ್ಲದೆ ಸೇವಿಸಿದರೆ ಒಬ್ಬನ ಪಾ[illegible]ನಾಗಬಹುದೆಂದು ಮನುಷ್ಯರಾದವರಿಗೆ ಸುಲಭವಾಗಿ ತಿಳಿಯಬಹುದು. ಪ್ರಕೃತ ನನ್ನ ದೂರು ಮತ್ತಾರ ಕುರಿತೂ ಅಲ್ಲ. ಪತ್ರಿಕೋದ್ಯಮಿಗಳನ್ನು ಕುರಿತು ಮಾತ್ರ. ನನ್ನ ಅಭಿಪ್ರಾಯದಲ್ಲಿ ಅವರು ನಿಷ್ಕರುಣಿಗಳು. ಜಗತ್ತಿನ ಪರಿಸ್ಥಿತಿಯ ಅರಿವು ಅವರಿಗಿಲ್ಲ.

ಹೀಗೆಂದೊಡನೆಯೇ ನೀವು ನನ್ನ ಕುರಿತು ಅನ್ಯಥಾ ಭಾವಿಸಬಾರದು. ನನ್ನ ಮೆದುಳು ಸರಿಯಾಗಿದೆಯೆಂದು ಮೊನ್ನೆ ವಿಮೆ ತೆಗೆಯುವ ಸಂದರ್ಭದಲ್ಲಿ ನನ್ನನ್ನು ಕಾಲಬುಡದಿಂದ ತಲೆಯ ವರೆಗೆ ಪರೀಕ್ಷಿಸಿದ ಡಾಕ್ಟರರು ಹೇಳಿದ್ದಾರೆ. ದ್ವಿತೀಯ ಬ್ರಹ್ಮರಾದ ಈ ಡಾಕ್ಟರರು ಅಭಿಪ್ರಾಯಕೊಟ್ಟರೆ ಇಂದಿನ ಜನರಿಗೆ ಸಾಕೆಂದು ನನ್ನಣಿಕೆ. ಅದಂತಿರಲಿ, ನಾನೀಗ ದೂರುತ್ತಿರುವುದು ಪತ್ರಿಕೋದ್ಯಮಿಗಳನ್ನು. ಮುದ್ರಣಾಲಯದಲ್ಲಿ ಮೊಳೆಗಳಿವೆಯೆಂದು, ತಮ್ಮ ಲೇಖನಿಯ ತುದಿ ಸವೆದು ಹೋಗುವ ತನಕ ಬರೆದು, ಪ್ರತಿದಿನ ಹಾಸಿಗೆಯಷ್ಟು ದೊಡ್ಡ ಪುಟಗಳಲ್ಲಿ ವಾರ್ತೆಗಳನ್ನು ತುಂಬಿದರೆ ಅದನ್ನು ಮಿದುಳಿನೊಳಗೆ ತುಂಬುವುದಾದರೂ ಹೇಗೆ? ಮಹಾಶಯ ಷರ್ಲಕ್ ಹಾಲ್ಮ್ಸ್ ಹೇಳಿರುವಂತೆ ಪ್ರತಿಯೊಂದು ಹೊಸ ವಿಷಯವು ಮಿದುಳಿನೊಳಗೆ ತುಂಬಲ್ಪಡುವಾಗ ಮೊದಲೇ ಶೇಖರಿಸಿಟ್ಟ ಒಂದು ಜ್ಞಾನವು ಹೊರನಡೆಯುತ್ತದೆ. ಈ ವಿಚಾರವನ್ನು ಕನ್ನಡ ಸಾಹಿತ್ಯಾಭಿಮಾನಿಗಳೆಲ್ಲರೂ ಮನಸ್ಸಿಗೆ ಹಚ್ಚಿಸಿ ಕೊಳ್ಳಬೇಕಾಗಿದೆ. ಕಾರಣ- ಈ ವರ್ತಮಾನ ಪತ್ರಿಕೆಗಳಿಂದಾಗಿ ಜನರು ಪ್ರತಿದಿವಸ ತಮ್ಮ ಜ್ಞಾನವನ್ನು ಕಳೆದುಕೊಳ್ಳುತ್ತಾರೆ. ‘‘ಏನಾಯಿತು- ಹೊಸ ಜ್ಞಾನ ಬರುವುದಿಲ್ಲವೇ?’’ ಎಂದು ನೀವು ನನ್ನ ಅನುಭವದ ಮಾತನ್ನು ತಿರಸ್ಕರಿಸಬಹುದು. ಆದರೆ ಷಡಕ್ಷರಿ, ರನ್ನ, ಪೊನ್ನ, ಜೈಮಿನಿ ಮೊದಲಾದವರ ಕಾವ್ಯ ಜ್ಞಾನವನ್ನು ನಾವು ಕಳೆದುಕೊಂಡು ಅದರ ಬದಲು ‘‘ಮಿಸ್ ಅನಾಹುತೆಯು ಲಂಡನಿಗೆ ಒಬ್ಬಳೇ ಹಾರಿದಳು.’’ ಎಂಬ ಜ್ಞಾನವನ್ನು ಅದೇಕೆ ಪಡೆಯಬೇಕು? ಇದರಿಂದ ನಮ್ಮ ಭಾಷೆಯಾಗಲೀ ಸಂಸ್ಕೃತಿಯಾಗಲೀ ಸುಧಾರಿಸುವುದು ಹೇಗೆ? ಆದುದರಿಂದ ಪತ್ರಿಕೋದ್ಯಮಿಗಳು ತಮ್ಮ ಪತ್ರಿಕೆಯ ಪುಟಗಳನ್ನು ಹೆಚ್ಚಿಸಿ, ಲೆಕ್ಕ ಮಿತಿಯಿಲ್ಲದ ವಾರ್ತೆಗಳನ್ನು ತುಂಬಿ ನಮ್ಮ ಜ್ಞಾನವನ್ನು ಹೊಡೆದೋಡಿಸುವುದರಿಂದ ರಾಷ್ಟ್ರಕ್ಕಾಗುವ ಪ್ರಯೋಜನ ಯಾವುದು? ಹೊಸತು ತುಂಬಲ್ಪಟ್ಟಂತೆ ಹಳೆಯದು ಹೊರಗೆ ಹೋಗುವ ಕ್ರಮವಿದ್ದುದರಿಂದ ಮನುಷ್ಯರು ಬದುಕಿದರು. ಇಲ್ಲದಿದ್ದರೆ ಈ ಜ್ಞಾನ ಸಂಗ್ರಹದಿಂದ ತಲೆಬುರುಡೆಗಳು ಒಡೆದುಹೋಗಿ ಜ್ವಾಲಾಮುಖಿಯೊಳಗಿನಿಂದ ಹೊಗೆ, ಬಿಸಿಯಾಗಿ ಕರಗಿದ ಖನಿಜದ್ರಾವಕವು ಹೊರ ಬರುವಂತೆ ಜ್ಞಾನವು ಕೂಡಾ ಹೊರಬರುತ್ತಿತ್ತು.

ಸಾಹಿತ್ಯ ಮತ್ತು ಚರಿತ್ರೆಯಲ್ಲಿ ನನಗೆ ತುಂಬಾ ಜ್ಞಾನವಿತ್ತು. ಈ ಪತ್ರಿಕೆಗಳನ್ನೋದಲಾರಂಭಿಸಿದ ಬಳಿಕ ಅವುಗಳೆಲ್ಲಾ ಮೋಡಗಳಂತೆ ಮಾಯವಾಗಿವೆ. ನನ್ನ ಯೋಚನಾ ಶಕ್ತಿಯು ಕೂಡಾ ಬರಿದಾಗಿದೆ. ಕೆಲವೊಮ್ಮೆ ನೀರ ಮೇಲಿರುವ ತಾವರೆಯನ್ನು ಕಂಡು ನಾನು ಪ್ರಾಣಿ ಸಂಗ್ರಹಾಲಯದಿಂದ ಆಗ ತಾನೇ ಹೊರಗೆ ಬಂದ ನೀರ ಕುದುರೆಯೆಂದು ಭಾವಿಸುವುದುಂಟು. ವಾರ್ತಾಪತ್ರಿಕೆಗಳ ಸುದ್ದಿಯು ನನ್ನ ಪ್ರತಿಯೊಂದು ವಾಕ್ಯದಲ್ಲಿಯೂ ಬಂದೇ ಬಿಡುತ್ತದೆ. ಜನರಲ್ಲಿ ಆಶ್ಚರ್ಯವನ್ನುಂಟುಮಾಡಲು ‘‘ಜಗತ್ತು ಆಗ ಅಂತ್ಯವಾಗುವದು ಈಗ ಅಂತ್ಯವಾಗುವುದೆಂದು” ನಮ್ಮನ್ನು ಬೆದರಿಸುವುದಾದರೂ ಏಕೆ? ಪತ್ರಿಕೋದ್ಯಮಿಗಳು ಈ ವಿಚಾರದ ಪ್ರಾಮುಖ್ಯತೆಯನ್ನು ಮನಗಂಡು ಆದಷ್ಟು ಬೇಗನೆ ಪತ್ರಿಕೆಗಳ ಪುಟಗಳನ್ನು ಕಡಿಮೆಮಾಡಿ, ಸಾಧ್ಯವಾಗುವಷ್ಟು ಕಡಿಮೆ ವಿಚಾರಗಳನ್ನು ಪ್ರಕಟಿಸಿ, ಬೆದರಿಸುವ ವಾರ್ತೆಗಳನ್ನು ಎಂದೂ ಪ್ರಕಟಿಸದೆ ನಮ್ಮ ಮನಸ್ಸನ್ನು ಶಾಂತಸ್ಥಿತಿಯಲ್ಲಿರಿಸಲು ಸಹಾಯ ಮಾಡಬೇಕೆಂದು ನನ್ನ ಬಿನ್ನಹ.

—ಶ್ರೀ. ಹ. ರಾ.

# ಶ್ವಾಸ ಕ್ರಮಂ (Respiratory System)

ಬರೆದವರು:- ಶ್ರೀ. ಯನ್. ಶ್ರೀಪಾದ ರಾವ್, ಎಲ್. ಎಂ. ಪಿ.
ಮದ್ರಾಸ್ ಸರಕಾರದ ಗರಿಷ್ಠರ ಸ್ವರ್ಣ ಪದಕದಾರರು.

●

ಆಹಾರಕ್ಕಿಂತ ವಾಯುವು ದೇಹಕ್ಕೂ ಪ್ರಾಣಕ್ಕೂ ಹೆಚ್ಚು ಅವಶ್ಯವಿರುತ್ತದೆ. ಈ ವಾಯುವನ್ನು ಮೂಗಿನಿಂದ ಶ್ವಾಸಮೊಳಗೆ ತೆಗೆದುಕೊಂಡಾಗ (*Inspiration*) ಕುತ್ತಿಗೆಯ ಎದುರಿಗಿರುವ ಟ್ರೆಕಿಯಾ (*Trachea*) ಮತ್ತು ಲೇರಿಂಕ್ಸ್ (*Larynx*) ಎಂಬ ನಳಿಗೆಯಿಂದ ಶ್ವಾಸಕೋಶಗಳಿಗೆ ಹೋಗುತ್ತದೆ. ಈ ವಾಯು ಶುದ್ಧಿಯಾಗಿರಬೇಕು. ಆದಷ್ಟು ಮಟ್ಟಿಗೆ ವಾಯುವಿನಲ್ಲಿ ಕಲ್ಮಶವಿದ್ದದ್ದು ತೆಗೆದು ಶುದ್ಧವಾದ ವಾಯುಮಾತ್ರ ಒಳಗೆ ಶ್ವಾಸ ಕೋಶಕ್ಕೆ ಹೋಗುವಂತೆ ಮೂಗಿನಲ್ಲಿ ರೋಮವಿದೆ. ಮತ್ತು ಮೂಗಿನಲ್ಲಿ ಮತ್ತು ಕಂಠದಲ್ಲಿ ಕೂಡಾ ಅಪಾಯಕರವಾದ ವಾಯುವನ್ನು ಶುದ್ಧಪಡಿಸಲಿಕ್ಕೆ ಟೋನ್ಸಿಲ್ಸ್ (*Tonsils*) ಮುಂತಾದ ಸಿಂಬಳದಂಥಾ (*Mucus glands*) ರಸ ಉತ್ಪನ್ನ ಆಗುವಂಥಾ ಗುಳಿಗೆಗಳಿವೆ. ಈ ಶ್ವಾಸದ ನಳಿಗೆಗಳು ನುಂಗು ವಾಗ ವಿನಹ ಬೇರೆ ಎಲ್ಲಾ ಕಾಲಗಳಲ್ಲಿಯೂ ತೆರೆದು ಇರುತ್ತವೆ. ಶ್ವಾಸನಳಿಗೆಯ ಶುರುವಿನಲ್ಲಿ ಚಿಕ್ಕ ಅಶ್ವತ್ಥದ ಎಲೆಯೋಪಾದಿ ಯಲ್ಲಿ (*Epiglottis*) ಒಂದು ಬಾಗಿಲು ಉಂಟು. ಈ ಬಾಗಿಲು ನುಂಗುವಾಗ ಶ್ವಾಸನಳಿಗೆಯನ್ನು (*Larynx*) ಮುಚ್ಚುತ್ತದೆ. ಹೀಗಾಗಿ ನುಂಗಿದ ಪದಾರ್ಥವು ಆಹಾರ ನಳಿಗೆ (*Gullet*) ಯಿಂದ ಜಠರಕ್ಕೆ (*Stomach*) ಹೋಗುತ್ತದೆ. ಈ ಲೇರಿಂಕ್ಸ್ (*Larynx*) ಎಂಬ ಶ್ವಾಸನಳಿಗೆಯಲ್ಲಿ ಸ್ವರ (*Voice*) ಕೂಡಾ ಉತ್ಪನ್ನವಾಗುತ್ತದೆ. ಈ ಸ್ವರ ಉತ್ಪನ್ನ ಮಾಡಲಿಕ್ಕೆ ಎರಡು ಚಿಕ್ಕ ಹಗ್ಗಗಳಂತಿರುವ ನಾಡಿಗಳಿವೆ. (*Vocal cords*) ಈ ಹಗ್ಗಗಳು ಕೂಡಾ ಶಬ್ದಮಾಡುವಾಗ ಬೇಕಾದಂತೆ ವಾಯುವನ್ನು ಶ್ವಾಸಕೋಶಕ್ಕೆ ಹೋಗದಂತೆ ಮಾಡಿ ಉಪಯೋಗಿ ಸಿಕೊಳ್ಳುತ್ತವೆ. ನುಂಗುವಾಗ ಈ ಸ್ವರದ ಹಗ್ಗಗಳು (*Vocal cords*) ಕೂಡಾ ಹತ್ತಿರ ಬಂದು ವಾಯುಕೂಡಾ ಶ್ವಾಸಕೋಶಗ ಳಿಗೆ ಹೋಗದಂತೆ ಶ್ವಾಸನಳಿಗೆಯ ದ್ವಾರವನ್ನು ಮುಚ್ಚಿಕೊಳ್ಳುತ್ತ ವೆ. ಆದ್ದರಿಂದ ಸ್ಮೃತಿತಪ್ಪಿ ಹೋದಾಗ ಹೊರತು (*Unconcious state*) ಬೇರೆ ಯಾವಾಗಲಾದರೂ ನುಂಗಿದ ಪದಾರ್ಥವು ಶ್ವಾಸ ಕೋಶಕ್ಕೆ ಹೋಗದಂತೆ ಇವೆ. ಶ್ವಾಸಕೋಶವನ್ನು ಇಷ್ಟು ಭದ್ರತೆ ಯಲ್ಲಿ ಇಡಲಿಕ್ಕೆ ಕಾರಣವೇನು? ವಾಯುವು ಪ್ರಾಣಕ್ಕೆ ಮುಖ್ಯವಾ ದದ್ದು ವಿಷಪದಾರ್ಥಗಳನ್ನು ವಾಯುವಿನಲ್ಲಿ ಸೇರಿಸಿ, ಅಥವಾ ಅದನ್ನೇ ವಾಯು (*Gaseous state*) ರೂಪದಲ್ಲಿ ಶ್ವಾಸವೆಳಕೊಂಡರೆ ಮರಣವು ಕೂಡಾ ಸಂಭವಿಸುತ್ತದೆ. ವಾಯುವು ಒಳ್ಳೇದೋ ಕೆಟ್ಟದೋ ಎಂಬುದನ್ನು ಮೂಗಿನ ವಾಸನಾಶಕ್ತಿಯಿಂದ ಸ್ವಲ್ಪ ಮಟ್ಟಿಗೆ ತಿಳಿಯಬಹುದು. ಆದರೆ ಈ ವಾಸನಾಶಕ್ತಿಯ ಮೇಲೆ ಮಾತ್ರ ಪೂರ್ಣ ಭರವಸೆ ಇಡಲಿಕ್ಕೆ ಆಗುವದಿಲ್ಲ. ವಿಷವಾಯು ಪದಾರ್ಥಗಳಿಗೆ ಸುವಾಸನೆ ಕೊಡಲಿಕ್ಕೆ ಸಾಧ್ಯಉಂಟು. ಶ್ವಾಸ ನಳಿಗೆಗಳಿಂದ ವಾಯುವು ಶ್ವಾಸಕೋಶದ ನಳಿಗೆಗಳಿಗೆ (*Bronchi*) ಹೋಗುತ್ತದೆ. ಅಲ್ಲಿಂದ ಶ್ವಾಸಕೋಶದ (*Lungs*) ಬಹಳ ತೆಳ್ಳಗಾಗಿರುವ ವಾಯುಗುಳ್ಳೆ (*Alveoli*) ಗಳಿಗೆ ಹೋಗಿ ರಕ್ತಕ್ಕೆ ಸೇರಿಕೊಳ್ಳುತ್ತದೆ. ಈ ರಕ್ತವು ವಾಯು ವನ್ನು ಸೇರಿಕೊಂಡು ದೇಹದ ಪ್ರತಿ ಒಂದು ಭಾಗದ ಕೂಪ (*Cells*) ಗಳಿಗೆ ಹೋಗಿ ಆಹಾರವನ್ನೂ ವಾಯುವನ್ನೂ ಒದಗಿಸಿಕೊಡುತ್ತದೆ. ಮಕ್ಕಳು ತಾಯಿಯ ಗರ್ಭದಲ್ಲಿರುವಾಗ ಆಹಾರವೂ ವಾಯುವೂ ತಾಯಿಯ ರಕ್ತದ ಮುಖಾಂತರವೇ ದೊರಕುತ್ತದೆ. ಮಕ್ಕಳು ತಾಯಿಯ ಗರ್ಭದಿಂದ ಹೊರಗೆ ಬಿದ್ದ ಕೂಡಲೇ ಕಿರಚಿ, ಅತ್ತು, ವಾಯುವನ್ನು ದೀರ್ಘಶ್ವಾಸಗಳಿಂದ ತಗೆದುಕೊಳ್ಳುತ್ತವೆ. ಮಗುವು ಹೆತ್ತಕೂಡಲೇ ಅಳದಿದ್ದರೆ ಅಳುವ ಹಾಗೆ ತಣ್ಣೀರಿನಲ್ಲಿ ಮತ್ತು ಬಿಸಿನೀರಿನಲ್ಲಿ ಎದೆಗೆ ಮತ್ತು ಮುಖಕ್ಕೆ ಬಡಿಯಬೇಕು. ಹೀಗೆ ಮಾಡುವ ಮೊದಲು ಮೂಗು ಬಾಯಿ ಶುದ್ಧವಾಗಿರಿಸಿ ವಾಯುವಿಗೆ ಆತಂಕವಿಲ್ಲದಂತೆಮಾಡಬೇಕು. ಕೆಲವರು ಮಗು ಅಳದಿದ್ದರೆ ಸುಟ್ಟು ಇಡುವ ಪದ್ಧತಿ ಉಂಟು. ಮತ್ತೂ ಅತ್ತು ಶ್ವಾಸತೆಗೆದುಕೊಳ್ಳದಿದ್ದರೆ ಎದೆಗೂಡನ್ನು ಚಿಕ್ಕದು ದೊಡ್ಡದುಮಾಡಿ ಶ್ವಾಸತೆಗೆದುಕೊಳ್ಳುವಂತೆ ಮಾಡಬೇಕು. (*Artificial respiratian*) ಮಕ್ಕಳು ಹುಟ್ಟಿದ ಕೂಡಲೆ ಸತ್ತ ಸಂಗತಿಯಲ್ಲಿ ಗರ್ಭದಲ್ಲಿಯೇ ಸತ್ತದ್ದೋ, ಹೆತ್ತನೇಲೆ ಜೀವಿಸಿ ಶ್ವಾಸತಕ್ಕೊಂಡು ಮತ್ತೆ ಸತ್ತದ್ದೋ ಎಂಬುದನ್ನು ತಿಳಿ ಯಲಿಕ್ಕೆ ನೀರಿನಲ್ಲಿ ಶ್ವಾಸಕೋಶಗಳನ್ನು (*Lungs*) ಹಾಕಿದರೆ ತಿಳಿಯುತ್ತದೆ. ನೀರಿನಲ್ಲಿ ಮುಳುಗಿದರೆ ಶ್ವಾಸ ತಕ್ಕೊಳ್ಳಲಿಲ್ಲ, ತೇಲಿದರೆ ಶ್ವಾಸತಕ್ಕೊಂಡದೆ ಎಂತ ತಿಳಕೊಳ್ಳಬೇಕು. ಒಳಗೆ ತಕ್ಕೊಂಡ ವಾಯುವು ರಕ್ತವನ್ನು ಸೇರಿ ಅಲ್ಲಿಂದ ದೇಹವು ಉಪ ಯೋಗಿಸಿ ಹೊರಗೆಹಾಕಬೇಕಾದ ವಾಯುವನ್ನು ಹೊರಗೆ (*Expiration*) ಹಾಕಿದರೂ ಕೆಲವು ವಾಯುವು ಯಾವಾಗಲೂ ಶ್ವಾಸಕೋಶದಲ್ಲೇ ಇರುತ್ತದೆ. (*Residual air*) ಮಕ್ಕಳು ಹುಟ್ಟಿದಾರಭ್ಯದಿಂದ ಸುಮಾರು 2 ತಿಂಗಳುಗಳ ವರೆಗೆ ಹೆಚ್ಚಾಗಿ ಅಳು ವದುಂಟು. ಹೀಗೆ ಶ್ವಾಸಕೋಶಗಳು ಅಳುವಾಗ ಚೆನ್ನಾಗಿ ದೀರ್ಘ ಶ್ವಾಸ ತೆಗೆದುಕೊಳ್ಳುವದರಿಂದ ವಾಯುವಿನಿಂದ ತುಂಬಿ ಮಗುವು ಆರೋಗ್ಯದಲ್ಲಿ ಇರಲಿಕ್ಕೆ ಸಹಕಾರಿಯಾಗಿರುತ್ತದೆ. ಹೀಗಂತ ಹೇಳಿ ಮಕ್ಕಳಿಗೆ ಹಸಿವೆಯಾಗಿ ಅಥವಾ ಏನಾದರೂ ಬೇನೆಯಾಗಿ ಅತ್ತರೆ ಅದಕ್ಕೆ ಮೊಲೆಯುಣಿಸಲೇ ಬೇಕು. ಅಥವಾ ಚಿಕಿತ್ಸೆಯನ್ನು ಮಾಡಬೇಕು. ವಾಯುವು ಪ್ರಾಣಕ್ಕೆ ಅವಶ್ಯವಿರುವದರಿಂದ ನಮ್ಮ ಮುಖ್ಯಪ್ರಾಣ ದೇವರಿಗೆ ವಾಯುವಿನ ಪುತ್ರನೆಂದು ಹೇಳುವದರಲ್ಲಿ ಅತಿಶಯೋಕ್ತಿಯಿಲ್ಲ. ವಾಯುವನ್ನು ಹೊರಗೆ ಒಳಗೆ ಹೋಗು ವಂತೆ ಬರುವಂತೆ (ಮುಂಚೆ ತಿಳಿಸಿದಂತೆ) ಎದೆಯ ತಿದಿಯಂತಹ ಆಕಾರವೂ, ಅದಕ್ಕೆ ಸಂಬಂಧಪಟ್ಟ ಸ್ನಾಯು ಅಥವಾ ಮಾಂಸ ಖಂಡವು (***Respiratory muscles***) ಚಲಿಸಿ, ಅಲ್ಲದೆ ಶ್ವಾಸಕೋಶದ ವಾಯು ಗುಳ್ಳೆಗಳು

(*Alveoli*) ರಬ್ಬರಿನಂತೆ (*Elastic*) ದೊಡ್ಡದಾಗಿ ಮಾಡಿದರೆ ತನ್ನಷ್ಟಕ್ಕೆ ಸಣ್ಣದಾಗುವ ತನ್ನಲ್ಲಿರುವ ಶಕ್ತಿಯಿಂದ ಶ್ವಾಸಕೋಶದಲ್ಲಿ ವಾಯು ಚಲಿಸಿ ರಕ್ತದ ಮುಖಾಂತರ ಇಡೀ ದೇಹಕ್ಕೆ ಚಲನಾಶಕ್ತಿ ಕೊಟ್ಟ ಪ್ರಾಣವನ್ನು ಕಾಪಾಡುತ್ತದೆ. ಈ ಹಲವು ಸ್ನಾಯು ಅಥವಾ ಮಾಂಸಖಂಡಗಳ ಪೈಕಿ ಮುಖ್ಯವಾದದ್ದು (*Diaphragm*) ಎದೆಯ ಒಳಗೆ ಕೆಳಭಾಗದಲ್ಲಿ ಹೊಟ್ಟೆಗೂ ಎದೆಗೂ ವಿಭಾಗಿಸಿ ಒಂದು ಕೊಡೆಯಂತೆ ಎದೆಯ ಕೆಳಗಿನ ಎಲುಬುಗಳಿಗೆ (*Ribs*) ತಗಲಿಕೊಂಡಿದೆ. ಈ ಶ್ವಾಸದ ಸ್ನಾಯುಗಳು ಕೂಡಾ ನಮ್ಮ ಇಚ್ಛಾವಿರಹಿತವಾಗಿದ್ದರೂ ನಮ್ಮ ಮನೋಬಲದಿಂದ ಸ್ವಲ್ಪಮಟ್ಟಿಗೆ ಕೆಲವು ಸಮಯ ಶ್ವಾಸವನ್ನು ತೆಗೆದುಕೊಳ್ಳುವದೂ, ಹಿಡಕೊಳ್ಳುವದೂ, ಬಿಡುವದೂ ನಮ್ಮ ಇಚ್ಛಾನುಸಾರ ಮಾಡಬಹುದು. ಇದಕ್ಕೆ ಕ್ರಮವಾಗಿ ಮೂಗು ಬಾಯಿ ವಗೈರೆ ಶುದ್ಧಿಮಾಡಿ ಪರಮಾತ್ಮನ ಧ್ಯಾನಮಾಡಿ ದೀರ್ಘಶ್ವಾಸ ತೆಗೆದುಕೊಂಡು, ಹಿಡಿದು, ಬಿಡುವುದಕ್ಕೆ ಪ್ರಾಣಾಯಾಮ ಎಂದು ಹೇಳುತ್ತಾರೆ. ಇದನ್ನು ಸಂಧ್ಯಾಕಾಲ ಅಂದರೆ ಬೆಳಿಗ್ಯೆ ಮತ್ತು ಸಂಜೆಗೆ ಸೂರ್ಯನ ಕಿರಣಗಳು ಸಹಕಾರಿಯಾಗಿರುವಾಗ ಸಾಗರದ ತೀರದಲ್ಲಿ, ಅಥವಾ ಶುದ್ಧ ವಾಯುವೂ ಸೂರ್ಯನ ಕಿರಣಗಳೂ ಚೆನ್ನಾಗಿ ಬೀಳುವಲ್ಲಿ ಮಾಡಿದರೆ 'ದೀರ್ಘ ಆಯುಷ್ಯಕ್ಕೂ ಒಳ್ಳೇ ಆರೋಗ್ಯಕ್ಕೂ ಬೇರೆ ಯೋಗಸಾಧನಗಳಿಗೂ ಅನುಕೂಲವಾಗಿರುತ್ತನೆ.

---

(೩೮ನೇ ಪುಟದಿಂದ ಮುಂದರಿದುದು)

ನಮಗೆ ಅಶುಭಕ್ಕಿಂತ ಶುಭ ಫಲವೇ ಹೆಚ್ಚಾಗಿ ಲಭಿಸುವದು. ಆದಕಾರಣ ಧನಲಾಭ, ಶತ್ರುಗಳ ಕೂಡೆ ಸಂಧಿ, ಕಲಹ ನಿವೃತ್ತಿ, ಕಾರ್ಯಜಯ, ಉದ್ಯೋಗಾದ್ಯಭಿವೃದ್ಧಿಗಳಾಗುವುವು. ಸ್ತ್ರೀಸುಖವೂ ಸಂ:ದ್ಯಕ್ತ ಸ್ತ್ರೀಯುಳ ಸಮಾಗಮವೂ ಆಗುವುದು. ತಾ. 13. 14. ಮತ್ತು 17 ಈ ದಿನಗಳಲ್ಲಿ ಸ್ವಜನರಲ್ಲಿ ಕಲಹವೂ, ಧನಹಾನಿ, ಪ್ರವಾಸ ಇತ್ಯಾದ್ಯಾಪತ್ತುಗಳು ದುಷ್ಕರ್ಮಿಗಳಿಗೆ ಮತ್ತು ದುಶ್ಚಾರಿತ್ರರಿಗೆ ಸಂಭವಿಸುವವು-

—**ಬಾಲಭಾಸ್ಕರ**

---

(೪೨ ಪುಟದಿಂದ ಮುಂದರಿದುದು.)

ಮಾ:—ನಿಮ್ಮ ಮಗನಲ್ಲವೆ ನಾನು?

ಸಾ:—ಛೀ, ಮರುಳಾ! ನಡೆಯಿಲ್ಲಿಂದ. ಹೊಟ್ಟೆಯಿಂದ ಹುಟ್ಟಿದ ಮಾತ್ರಕ್ಕೇನು ಮಗನಾಗುವನೆ? ತಂದೆಯ ಗುಣವು ಎಳ್ಳಷ್ಟಾದರೂ ಮಗನಲ್ಲಿ ಬೇಡವೆ? ಹಣದ ವಿಷಯದಲ್ಲಿ ನೀನು ನನ್ನ ಮಗನೂ ಅಲ್ಲ,ನಾನು ನಿನ್ನ ತಂದೆಯೂ ಅಲ್ಲ (ಎಂದು ತಿರುಗಿ ನಿಲ್ಲುವನು.) ಮಾಧವನು ಸಿಟ್ಟಿನಿಂದ ಹೊರಟು ಹೋಗುವನು.

(ಮುಂದರಿಯುವುದು.)

Printed and published by P Venkataramanacharya for and on behalf of SUPPLY AGENCY LTD., at Manipal Power Press, Udipi.

REGD. NO. M. 3935